# ಪ್ರಬೋಧಚಂದ್ರೋ

ಎಂಬ

# ನಾಟಕವು

ವ್ಯಾಕರಣ ವಿದ್ವಾನ್
ಎಂ. ಕೆ. ಶ್ರೀನಿವಾಸರಾಘವಾಚಾರ್ಯರಿ
ಕನ್ನಡಿಸಲ್ಪಟ್ಟು

ಎಂ. ವೆಂಕಟಕೃಷ್ಣಯ್ಯನವರಿ
ಪ್ರಚುರಪಡಿಸಲ್ಪಟ್ಟಿತು.



MYSOR
PRINTED AT THE K.
1920

Price A

# ಪ್ರಬೋಧಚಂದ್ರೋದಯ

ಎಂಬ

# ನಾಟಕವು

ವ್ಯಾಕರಣ ವಿದ್ವಾನ್

ಎಂ. ಕೆ. ಶ್ರೀನಿವಾಸರಾಘವಾಚಾರ್ಯರಿಂದ

ಕನ್ನಡಿಸಲ್ಪಟ್ಟು

ಎಂ. ವೆಂಕಟಕೃಷ್ಣಯ್ಯನವರಿಂದ

ಪ್ರಚುರಪಡಿಸಲ್ಪಟ್ಟಿತು





MYSORE

PRINTED AT THE K. V. V. PRESS,

1920.

Price As. 8.

# ಉಪೋದ್ಘಾತ

ಲೋಕದಲ್ಲಿ ಮನುಷ್ಯ ಜನ್ಮವು ಸುಲಭವಾಗಿ ದೊರೆಯುವುದಿಲ್ಲವು. ಎಂ
ಭತ್ತು ನಾಲ್ಕು ಲಕ್ಷ ಜನ್ಮಗಳಲ್ಲಿ ತೊಳಲಿ ತೊಳಲಿ ಯಾವುದೋ ಒಂದಾವರ್ತಿ
ಸುಕೃತ ವಿಶೇಷದಿಂದ ಈ ಜನ್ಮವು ದೊರೆಯುವುದು. ಅತಿ ಹೆಚ್ಚು ಕಾಲ ಅಂದರೂ
ಒಂದು ನೂರು ವರ್ಷಗಳಿಗಿಂತಲೂ ಹೆಚ್ಚು ಕಾಲದವರೆಗೆ ಈ ಮನುಷ್ಯ ದೇಹ
ವನ್ನು ಜೀವನು ಹೊಂದಿ ಇರುವುದಿಲ್ಲವು. ಆದ್ದರಿಂದಲೇ "ದುರ್ಲಭೋ
ಮಾನುಷೋ ದೇಹಃ ಪ್ರಾಣಿನಾಂ ಕ್ಷಣಭಂಗುರಃ" ಎಂದು ಶ್ರೀಮದ್ಭಾಗವತ
ದಲ್ಲಿ ಹೇಳಿರುವರು. ಅದರಲ್ಲಿ ಆಧಿ, ವ್ಯಾಧಿ, ಬಾಲ್ಯ, ವಾರ್ಧಕ ಇವುಗಳಿಂದ
ಕೆಲವು ಕಾಲಗಳು ವ್ಯರ್ಥವಾಗಿ ಕಳೆದುಹೋಗುವುವು. ಆದ್ದರಿಂದ ಈ
ಮನುಷ್ಯ ಜನ್ಮವು ದೊರೆತಿರುವಾಗಲೇ ಮತ್ತು ಅದು ಸುದೃಢವಾಗಿರುವಾಗಲೇ
ಪುರುಷಾರ್ಥಗಳನ್ನು ಸಾಧಿಸಿಕೊಳ್ಳಬೇಕು. ಧರ್ಮಾರ್ಥಕಾಮ ಮೋಕ್ಷಗಳೆಂಬ
ಚತುರ್ವಿಧ ಪುರುಷಾರ್ಥಗಳನ್ನು ಸಾಧಿಸಿಕೊಳ್ಳುವುದಕ್ಕೆ ಯೋಗ್ಯವಾದ ಅವಯವ
ಸನ್ನಿವೇಶಗಳೂ, ಅದಕ್ಕೆ ಸಾಧಕವಾದ ಜ್ಞಾನವೂ ಮನುಷ್ಯ ದೇಹದಲ್ಲಿ
ಹೊರತು ಇನ್ನು ಯಾವ ದೇಹದಲ್ಲಿಯೂ ಇರುವುದಿಲ್ಲ. ಆ ಪುರುಷಾರ್ಥ
ಗಳಲ್ಲಿ ಅರ್ಥಕಾಮಗಳು ಐಹಿಕ ಸುಖಸಾಧನಗಳಾಗಿಯೂ, ಧರ್ಮಮೋಕ್ಷ
ಗಳು ಆಮುಷ್ಮಿಕ ಸುಖಸಾಧನಗಳಾಗಿಯೂ ಇರುವುವು. ಐಹಿಕ ಸುಖಗಳೆಲ್ಲವೂ
ಈ ದೇಹದೊಂದಿಗೇನೇ ನಷ್ಟವಾಗುವುದರಿಂದ ಅವು ಪರಮ ಪುರುಷಾರ್ಥಗಳಲ್ಲವು.
ಆಮುಷ್ಮಿಕದಲ್ಲಿ ಸ್ವರ್ಗಾದಿ ಸುಖಗಳಿಗೆ ಸಾಧನವಾದ ಧರ್ಮವೂ ಸಹ "ಕ್ಷೀಣೇ
ಪುಣ್ಯೇ ಮರ್ತ್ಯಲೋಕಂ ವಿಶಂತಿ" ಎಂದು ಪುಣ್ಯವು ಕ್ಷೀಣವಾದ ಮೇಲೆ ಜನನ
ಮರಣ ಕ್ಲೇಶಗಳಿಗೆ ಅವಕಾಶವನ್ನು ಉಂಟುಮಾಡುವುದರಿಂದ ಪರಮ ಪುರುಷಾರ್ಥ
ವಾಗಲಾರದು. ಆದುದರಿಂದ ಮೋಕ್ಷವೇ ಪರಮ ಪುರುಷಾರ್ಥವು. ಅದು
ಪುನಃ ಈ ಸಂಸಾರ ದುಃಖವನ್ನು ಕೊಡದೆ ಅನಂತವಾಗಿಯೂ, ಶಾಶ್ವತವಾಗಿಯೂ

ಇರುವ ಸುಖವನ್ನು ಕೊಡುವುದೆಂದು ಜ್ಞಾನಿಗಳೆಲ್ಲರೂ ನಿಶ್ಚಯಿಸಿರುವರು. ಈ ವಿಧವಾದ ನಿರತಿಶಯಾನಂದಸರೂಪ ಮೋಕ್ಷವನ್ನು ಹೊಂದಬೇಕಾದ ಕ್ರಮ ವನ್ನು ವೇದಾಂತ ಶಾಸ್ತ್ರಗಳು ತಿಳಿಸುವುವು. ಈ ವೇದಾಂತಾರ್ಥವು ಅರ್ಥಕಾಮಾ ಸಕ್ತರಿಗೆ ದುರವಗಾಹವಾಗಿರುವುದರಿಂದ ಅವರಿಗೂ ಸುಲಭವಾಗಿ ತಿಳಿಯುವಂತೆ ಮಾಡಬೇಕೆಂಬ ಅಭಿಪ್ರಾಯದಿಂದ ಕೃಷ್ಣಮಿಶ್ರರೆಂಬ ಮಹನೀಯರು ನಾಟಕ ರೂಪದಿಂದ ತಿಳಿಸಿದರೆ ಸರ್ವರೂ ಅರಿತು ಕೃತಾರ್ಥರಾಗಬಹುದೆಂದು ಪ್ರಬೋಧ ಚಂದ್ರೋದಯವೆಂಬ ನಾಟಕವನ್ನು ರಚಿಸಿದರು. ಈ ನಾಟಕದಲ್ಲಿ ಮನುಷ್ಯನು ಇಂದ್ರಿಯಪಾಟವವನ್ನು ಹೊಂದಿ, ಸಂಸಾರಕ್ಷೇತ್ರಕ್ಕೆ ಪ್ರವೇಶಿಸುವುದಕ್ಕೆ ಅರ್ಹ ನಾದ ವಡಸೆಯೇ ಕಾಮ, ಕ್ರೋಧಾದಿಗಳು ಹೇಗೆ ಅವನನ್ನು ಆಕ್ರಮಿಸಿಕೊಳ್ಳು ವುವೋ, ಅವುಗಳಿಂದ ಆಕ್ರಮಿಸಲ್ಪಟ್ಟು ಎಷ್ಟೆಷ್ಟು ಅನರ್ಥಗಳಿಗೆ ಮನುಷ್ಯನು ಗುರಿ ಯಾಗುವನೋ, ಅಧರ್ಮವನ್ನು ಧರ್ಮವೆಂತಲೂ, ಧರ್ಮವನ್ನು ಅಧರ್ಮವೆಂತಲೂ ಹೇಗೆ ತಿಳಿಯುವನೋ, ಮೋಹಪರವಶನಾಗಿ ಅನೇಕ ಅಕಾರ್ಯಗಳನ್ನು ಮಾಡಿ, ಅನಿರ್ವಚನೀಯವಾದ ದುಃಖಗಳಿಗೆ ಹೇಗೆ ಗುರಿಯಾಗುವನೋ, ಈ ಕಾಮಾದಿಗಳನ್ನ ಹೇಗೆ ನಿವಾರಣೆ ಮಾಡಿಕೊಳ್ಳಬೇಕೋ, ವಿವೇಕದ ಬಲದಿಂದ ಇವುಗಳು ಹೇಗೆ ನಿವೃತ್ತಗಳಾಗಿ ವೈರಾಗ್ಯವು ಹುಟ್ಟುವುದೋ, ಅದರಿಂದ ವಿಷ್ಣುಭಕ್ತಿಯು ಉತ್ಪನ್ನ ವಾಗಿ ಮೋಕ್ಷವನ್ನು ಹೇಗೆ ಹೊಂದುವನೋ, ಈ ವಿಷಯಗಳೆಲ್ಲವೂ ಮನುಷ್ಯನ ಗುಣಗಳಾದ ಕಾಮಾದಿಗಳನ್ನೂ, ವಿವೇಕಾದಿಗಳನ್ನೂ ಪಾತ್ರಗಳನ್ನಾಗಿಟ್ಟು ಬಹು ವಿಲಕ್ಷಣ ರೀತಿಯಿಂದ ಸುಬೋಧವಾಗುವಂತೆ ವರ್ಣಿತಗಳಾಗಿವೆ. ಈ ನಾಟಕ ದಲ್ಲಿ ಅದ್ವೈತ ಸಿದ್ಧಾಂತವು ಸುಲಭವಾಗಿ ತಿಳಿದುಬರುವುದು. ಅದ್ವೈತ ಸಿದ್ಧಾಂ ತದ ತತ್ವವೇನೆಂದರೆ—

ಚೇತನಾಚೇತನಾತ್ಮಕವಾದ ಈ ಪ್ರಪಂಚವು ಪರಮಾರ್ಥವಲ್ಲವು. ಶುಕ್ತಿ ಯಲ್ಲಿ ರಜತವೂ, ರಜ್ಜುವಿನಲ್ಲಿ ಸರ್ಪವೂ, ಮರೀಚಿಕೆಯಲ್ಲಿ ಜಲವೂ ತೋರುವಂತ ಅಜ್ಞಾನದಿಂದ ಬ್ರಹ್ಮನಲ್ಲಿ ಈ ಪ್ರಪಂಚವು ತೋರುವುದು. ಪರಮಾರ್ಥವಾದ ರಜತ, ಸರ್ಪ, ಜಲ ಇವುಗಳಲ್ಲಿ ಆಗಬೇಕಾದ ಕಾರ್ಯಗಳು ಶುಕ್ತಿಯಲ್ಲಿಯೂ, ರಜ್ಜು ವಿನಲ್ಲಿಯೂ, ಮರೀಚಿಕೆಯಲ್ಲಿಯೂ ಆಗುವುದಿಲ್ಲವಾದಕಾರಣ ಇವು ಪ್ರಾತಿಭಾಸಿಕ

ಗಳಾಗಿರುವುವು. ವಸ್ತುಗಳೆಲ್ಲವೂ ಪ್ರಾತಿಭಾಸಿಕ, ವ್ಯಾವಹಾರಿಕ, ಪಾರಮಾರ್ಥಿಕಗಳೆಂದು ಮೂರುವಿಧಗಳಾಗಿರುವುವು. ಪ್ರಪಂಚವು ಅಜ್ಞಾನದಿಂದ ಕಾಣಲ್ಪಡುವುದಾದರೂ ಅನೇಕ ಕಾರ್ಯಗಳಿಗೆ ಉಪಯೋಗವಾಗಿರುವುದರಿಂದ ವ್ಯಾವಹಾರಿಕವೆನ್ನಲ್ಪಡುವುದು. ಇವೆರಡೂ ತತ್ವಜ್ಞಾನದಿಂದ ನಿವೃತ್ತಗಳಾಗುವುವು. ಹೇಗೆಂದರೆ:—ಶುಕ್ತಿಯನ್ನು ನೋಡಿ ರಜತವೆಂದು ಭ್ರಮೆಗೊಂಡವನಿಗೆ "ಇದು ರಜತವಲ್ಲವು ಶುಕ್ತಿಯು" ಎಂದು ಪರಮಾರ್ಥಜ್ಞಾನವುಂಟಾದ ಮೇಲೆ ಭ್ರಮದಿಂದ ತೋರಿದ ರಜತಜ್ಞಾನವು ಹೇಗೆ ನಿವೃತ್ತವಾಗುವುದೋ ಹಾಗೆಯೇ 'ಸರ್ವವೂ ಬ್ರಹ್ಮವು ನೀನು ಆ ಪರಬ್ರಹ್ಮನಾಗಿರುವೆ' ಎಂದು ಪ್ರತಿಪಾದಿಸುವ ವೇದಾಂತ ವಾಕ್ಯಗಳಿಂದ ಬ್ರಹ್ಮಕ್ಕಿಂತಲೂ ಬೇರೆಯಾದ ವಸ್ತುವಿಲ್ಲವೆಂದು ತಿಳಿದುಬರುವುದರಿಂದ ಪ್ರಪಂಚದ ಜ್ಞಾನವು ನಿವೃತ್ತವಾಗುವುದು. ಅದೇ ಮುಕ್ತಿಯೆನ್ನಿಸಿಕೊಳ್ಳುವುದು. ತತ್ವಜ್ಞಾನದಿಂದ ನಿವೃರ್ತಿಸಲ್ಪಡತಕ್ಕವುಗಳೆಲ್ಲವೂ ಪರಮಾರ್ಥವಲ್ಲದ್ದರಿಂದ ನಿರ್ಗುಣಬ್ರಹ್ಮವೊಂದೇ ಪರಮಾರ್ಥವು. ಮತ್ತು ಅವಿದ್ಯೆ ಎಂಬುವುದು ಬ್ರಹ್ಮನಲ್ಲಿ ಅನಾದಿಯಾಗಿರುವುದು. ಅವಿದ್ಯೆಯು ತತ್ವಜ್ಞಾನದಿಂದ ನಿವೃತ್ತವಾದರೆ, ಆ ಅವಿದ್ಯಾನಿವೃತ್ತಿಯೇ ಮೋಕ್ಷವು. ಅವಿದ್ಯೆಯಿಂದ ಅನೇಕ ಶರೀರಗಳೊಡನೆ ಸೇರಿರುವುದಾಗಿ ತೋರಿದಾಗ ಆ ಬ್ರಹ್ಮನೇ ಜೀವಾತ್ಮರೆಂದು ವ್ಯವಹರಿಸಲ್ಪಡುವನು. ಆದುದರಿಂದ ಬ್ರಹ್ಮಕ್ಕಿಂತಲೂ ಬೇರೆ ವಸ್ತುವಿಲ್ಲವು. "ಇತ್ಥಂಚ" ಭೇದವೇ ಸಂಸಾರವು. ಅಭೇದವೇ ಮೋಕ್ಷವು. ಈ ವಿಷಯವನ್ನೇ ಸಮಸ್ತ ವೇದಶಾಸ್ತ್ರಗಳೂ ಹೇಳುವುವು. ಇದೇ ಅದ್ವೈತ ಸಿದ್ಧಾಂತವು. ಈ ಸಿದ್ಧಾಂತವು ಪ್ರಬೋಧಚಂದ್ರೋದಯ ನಾಟಕದಲ್ಲಿ ಬಹು ಲಲಿತವಾಗಿ ವರ್ಣಿತವಾಗಿರುವುದು. ಇದು ಸಂಸ್ಕೃತಭಾಷಾಮಯವಾಗಿರುವುದರಿಂದ ಇದನ್ನು ಕನ್ನಡದಲ್ಲಿ ಪರಿವರ್ತಿಸಿ, ಕನ್ನಡ ಪರಿವರ್ತನೆಯನ್ನು ಓದುವುದರಿಂದ ಸಂಸ್ಕೃತ ಪ್ರಬೋಧ ಚಂದ್ರೋದಯ ನಾಟಕವೂ ಸುಲಭವಾಗಿ ಅರ್ಥವಾಗುವಂತೆ ಮಾಡಬೇಕೆಂದು ಯೋಚಿಸಿ, ವ್ಯಾಕರಣ ವಿದ್ವಾನ್ ಎಂ. ಕೆ. ಶ್ರೀನಿವಾಸ ರಾಘವಾಚಾರ್ಯರಿಂದ ಕನ್ನಡದಲ್ಲಿ ಬರೆಸಿ ಮುದ್ರಿಸಲಾಯಿತು. ಇದರಲ್ಲಿ ಖರ್ಚು ಕಳೆದು ಉಳಿಯುವ ಮೊಬಲಗಿನಲ್ಲಿ ಅರ್ಧಭಾಗವನ್ನು ಅನಾಥಾಲಯಕ್ಕೆ ಉಪಯೋಗಿಸುವುದಾಗಿ ನಿಶ್ಚಯಿಸಿರುತ್ತೆ. ಅದರಂತೆ ಮೇಲ್ಕಂಡ ಪಂಡಿತರೂ ಒಪ್ಪಿರುತ್ತಾರೆ. ಹೀಗೆ ಇನ್ನೂ ಅನೇಕ ಗ್ರಂಥಗಳನ್ನು

ಕನ್ನಡದಲ್ಲಿ ಬರೆಸಿ ಮುದ್ರಿಸಲು ಏರ್ಪಾಡು ಮಾಡಿರುತ್ತೆ. ಇದೇ ಮೊದಲನೆಯ ಗ್ರಂಥವು. ಈ ದ್ರವ್ಯವನ್ನು ಅನಾಥಾಲಯಕ್ಕೆ ಉಪಯೋಗಿಸುವುದರಿಂದ ಧರ್ಮಾಭಿಮಾನಿಗಳು ಇದಕ್ಕೆ ಉದಾರಾಶ್ರಯವನ್ನು ಕೊಟ್ಟು ಧರ್ಮಸಂರಕ್ಷಣವನ್ನು ಮಾಡಬೇಕೆಂದು ಪ್ರಾರ್ಥಿಸುತ್ತೇನೆ. ಇದರಿಂದ ವೇದಾಂತ ವಿಷಯಗಳನ್ನು ಸುಲಭವಾಗಿ ತಿಳಿದುಕೊಳ್ಳುವುದು ಒಂದು, ಅನಾಥಾಲಯಕ್ಕೆ ಧರ್ಮಸಹಾಯ ಮಾಡಿದ್ದು ಒಂದು, ಪಂಡಿತರುಗಳಿಗೆ ಪ್ರೋತ್ಸಾಹ ಕೊಡುವುದು ಒಂದು ಹೀಗೆ ಒಂದು ಕೆಲಸದಿಂದ ಮೂರು ಫಲಗಳು ದೊರೆಯುವುದರಿಂದ ಈ ಸುಸಮಯವನ್ನು ಯಾರೂ ಕಳೆದುಕೊಳ್ಳಬಾರದೆಂದು ದೃಢವಾಗಿ ನಂಬಿದೇನೆ.

ಎಂ. ವೆಂಕಟಕೃಷ್ಣಯ್ಯ

|| ಶುಭಮಸ್ತು ||

# ಪ್ರಬೋಧ ಚಂದ್ರೋದಯ.

## ಪ್ರಥಮಾಂಕ.

ಸೂತ್ರಧಾರ—ಸಕಲ ಸಾಮಂತ ಚಕ್ರಚೂಡಾಮಣಿಯಿಂದ ನೀರಾಜಿತ ಚರಣಾರವಿಂದನಾಗಿಯೂ, ಶತ್ರುವಕ್ಷೋವಿದಾರಣದಲ್ಲಿ ನರಸಿಹ್ಮನಾಗಿಯೂ, ಶತ್ರುರಾಜರುಗಳೆಂಬ ಪ್ರಳಯ ಮಹಾಸಮುದ್ರದಲ್ಲಿ ಮುಳುಗಿದ ಭೂಮಿಯನ್ನು ಉದ್ಧರಿಸುವುದರಲ್ಲಿ ಮಹಾವರಾಹನಾಗಿಯೂ, ದಿಗಂತ ವಿಶ್ರಾಂತವಾದ ಕೀರ್ತಿಯುಳ್ಳವನಾಗಿಯೂ ಇರುವ, ಶ್ರೀಮದ್ಗೋಪಾಲನಿಂದ ಆಜ್ಞಾಪಿಸಲ್ಪಟ್ಟಿರುವೆನು. ಹೇಗೆಂದರೆ:—ನಮ್ಮ ಪ್ರಿಯ ಸ್ನೇಹಿತನಾದ, ಕೀರ್ತಿವರ್ಮ ಮಹಾರಾಜನ ದಿಗ್ವಿಜಯ ವ್ಯಾಪಾರದಲ್ಲಿ ಕೆಲವು ದಿವಸಗಳು ಬ್ರಹ್ಮಾನಂದರಸಾನುಭವಕ್ಕೆ ವಿಘ್ನ ಉಂಟಾಗಿ, ನಾನಾ ವಿಧವಾದ ವಿಷಯ ರಸಸ್ಪರ್ಶದಿಂದ, ದೂಷಿತವಾದಂತೆ ಹೇಗೋ ಒಂದು ವಿಧವಾಗಿ ದಿವಸಗಳನ್ನು ಕಳೆದಿದ್ದಾಯಿತು. ಈಗ ನಾವು ಕೃತಕೃತ್ಯರಾದೆವು. ಏಕೆಂದರೆ—ರಾಜನಿಗೆ ಶತ್ರುಭೂತರಾದವರನ್ನು ನಾಶ ಮಾಡಿದ್ದಾಯಿತು. ಭೂಮಿಯ ಸಂರಕ್ಷಣಭಾರವು, ಪ್ರಸಿದ್ಧರಾದ ಮಂತ್ರಿಗಳಲ್ಲಿಟ್ಟದ್ದಾಯಿತು. ಸಮುದ್ರಪರ್ಯಂತವಾದ ಭೂಮಿಯಲ್ಲಿ ನಮ್ಮ ಮಹಾರಾಜನ ಸಾಮ್ರಾಜ್ಯವು ನೆಲೆಗೊಳಿಸಲ್ಪಟ್ಟಿತು. ಆದುದರಿಂದ ಈಗ ನಾವು, ಶಾಂತಿರಸದಿಂದ ತುಂಬಿರುವ ನಾಟಕವನ್ನು ಅಭಿನಯಿಸುವುದರಿಂದ ಉಂಟಾಗುವ ವಿನೋದವನ್ನು ಅನುಭವಿಸುವುದಕ್ಕೆ ಅಪೇಕ್ಷಿಸುತ್ತೇನೆ. ಪೂರ್ವದಲ್ಲಿ, ಪೂಜ್ಯರಾದ ಕೃಷ್ಣಮಿಶ್ರರಿಂದ

"ಪ್ರಬೋಧ ಚಂದ್ರೋದಯ" ವೆಂಬ ನಾಟಕವು ನಿರ್ಮಿಸಲ್ಪಟ್ಟು, ನಿನ್ನ ವಶಕ್ಕೆ ಕೊಡಲ್ಪಟ್ಟಿತ್ತಷ್ಟೆ. ಅದನ್ನು ನೀನು ಕೀರ್ತಿವರ್ಮರಾಜನ ಮುಂದೆ ಅಭಿನಯಿಸಬೇಕು. ರಾಜನು ಪರಿವಾರದೊಂದಿಗೆ ನೋಡಲು ಕುತೂಹಲವುಳ್ಳವನಾಗಿದ್ದಾನೆ. (ಎಂದು) ಮನೆಗೆ ಹೋಗಿ ಪತ್ನಿಯನ್ನು ಕರೆದು ಸಂಗೀತವನ್ನು ಆರಂಭಿಸುವನು.

(ತೆರೆಯ ಕಡೆ ತಿರುಗಿ) ಆರ್ಯಳೆ! ಇತ್ತ ಬರುವವಳಾಗು.

ನಟೀ—(ಪ್ರವೇಶಿಸಿ) ಆರ್ಯನೆ! ಇದೋ ಬಂದಿರುವೆನು. ಏನಪ್ಪಣೆ?

ಸೂತ್ರಧಾರ—ಆರ್ಯಳೇ! ನಿನಗೆ ಎಲ್ಲವೂ ತಿಳಿದಿದೆಯಷ್ಟೆ. ಭುವನ ವಿಖ್ಯಾತನಾದ ಗೋಪಾಲನು ತನ್ನ ಪರಾಕ್ರಮದಿಂದ ಶತ್ರುಗಳನ್ನು ಜಯಿಸಿ, ಸಾಮ್ರಾಜ್ಯ ಪಟ್ಟಾಭಿಷೇಕದಲ್ಲಿ, ಕೀರ್ತಿವರ್ಮರಾಜನನ್ನು ನೆಲೆಗೊಳಿಸಿರುವನು. ಅಂತಹ ಗೋಪಾಲನು ಶಾಂತಪಥಪ್ರವಿಷ್ಟನಾಗಿ, ಆತ್ಮವಿನೋದಕ್ಕೋಸ್ಕರ "ಪ್ರಬೋಧ ಚಂದ್ರೋದಯ" ಎಂಬ ನಾಟಕವನ್ನು, ಅಭಿನಯಿಸುವುದಕ್ಕೆ ಆಜ್ಞಾಪಿಸಿರುವನು. ಆದ್ದರಿಂದ ಆಯಾಯ ಪಾತ್ರಗಳು ಸಿದ್ಧವಾಗುವಂತೆ ಆಜ್ಞಾಪಿಸು.

ನಟೀ—ಆರ್ಯನೆ! ಇದು ಪರಮಾಶ್ಚರ್ಯವೇ ಸರಿ. ಅಂತಹ ಭುಜಬಲ ಪರಾಕ್ರಮದಿಂದ ಸಕಲ ಶತ್ರುಗಳನ್ನೂ ಜಯಿಸಿ, ಅಲೆಗಳಂತೆ ಚಂಚಲಗಳಾದ ಕುದುರೆಗಳನ್ನೂ, ಬೆಟ್ಟದಂತಿರುವ ದೊಡ್ಡ ದೊಡ್ಡ ಆನೆಗಳನ್ನೂ, ಬಾಣಗಳಿಂದಲೂ, ಕತ್ತಿಗಳಿಂದಲೂ, ಕ್ಷೀರಸಮುದ್ರವನ್ನು ಮಥಿಸಿದಂತೆ ಮಥಿಸಿ ಸಮರ ವಿಜಯ ಲಕ್ಷ್ಮಿಯನ್ನು ಹೊಂದಿ, ಸಕಲ ಋಷಿಗಳಿಂದಲೂ ಶ್ಲಾಘಿಸುವುದಕ್ಕೆ ಯೋಗ್ಯವಾದ ವೀರಚರಿತ್ರೆಯುಳ್ಳವನಿಗೆ ಇಷ್ಟು ಉಪಶಾಂತಿಯು ಹೇಗೆ ಉಂಟಾಯಿತು?

ಸೂತ್ರಧಾರ—ಆರ್ಯಳೇ! ಬ್ರಹ್ಮತೇಜಸ್ಸು ಸ್ವಭಾವದಿಂದಲೇ ಶಾಂತವಾಗಿರುವುದು. ಯಾವುದಾದರೂ ಒಂದು ಕಾರಣದಿಂದ ವಿಕಾರವನ್ನು ಹೊಂದಿದಾಗ್ಯೂ, ಪುನಃ ತನ್ನ ಸ್ವಭಾವವಾದ ಉಪಶಾಂತಿಯನ್ನೇ ಹೊಂದುವುದು. ಪ್ರಳಯ ಕಾಲದಲ್ಲಿ ಅಲ್ಲೋಲಕಲ್ಲೋಲವಾಗುವ ಸಮುದ್ರವು, ಸಮಸ್ತ

ಪರ್ವತಗಳನ್ನು ಮುಳುಗಿಸಿದಾಗ್ಯೂ, ಇತರ ಕಾಲಗಳಲ್ಲಿ ನಿಶ್ಚಲವಾಗಿಯೂ, ನಿರ್ಮಲವಾಗಿಯೂ, ಮೇರೆಯನ್ನು ಮೀರದೆಯೂ ಇರುವುದಲ್ಲವೆ? ಇದೂ ಅಲ್ಲದೆ ಶ್ರೀಮನ್ನಾರಾಯಣಾಂಶದಿಂದ ಲೋಕಹಿತಕ್ಕಾಗಿ ಹುಟ್ಟಿದ ಅಂತಹ ಪೌರುಷ ಭೂಷಣರಾದ ಪುರುಷರುಗಳು, ಭೂಮಿಯಲ್ಲಿ ಅವತರಿಸಿ, ತಮ್ಮ ಕಾರ್ಯವನ್ನು ಪೂರೈಸಿ ಪುನಃ ಶಾಂತಿಯನ್ನೇ ಹೊಂದುವರು. ಈ ವಿಷಯದಲ್ಲಿ ಪರಶುರಾಮನನ್ನೇ ದೃಷ್ಟಾಂತವಾಗಿ ತಿಳಿದುಕೊ. ಆ ಪರಶುರಾಮನು, ಸ್ತ್ರೀಯರೂ, ಬಾಲರೂ, ವೃದ್ಧರೂ ಎಂಬುವುದನ್ನೂ ಕೂಡ ಯೋಚಿಸದೆ ನಿರ್ದಯನಾಗಿ, ತನ್ನ ಕುಠಾರದಿಂದ ಇಪ್ಪತ್ತೊಂದಾವರ್ತಿ ರಾಜರುಗಳನ್ನು ಸಂಹರಿಸಿ, ಅವರ ದೇಹದಿಂದ ಹರಿದ ರಕ್ತದ ನದಿಯಲ್ಲಿ ಸ್ನಾನ ಮಾಡಿ, ಪಿತೃ ತರ್ಪಣವನ್ನು ಮಾಡಿದನು. ಹೀಗೆ ತನ್ನ ಪರಾಕ್ರಮದಿಂದ ಭೂಮಿಯ ಭಾರವನ್ನು ಇಳಿಸಿ, ಅನಂತರ ಪರಮಶಾಂತಿಯನ್ನು ಹೊಂದಿದನಲ್ಲವೆ? ಹಾಗೆಯೇ ಈ ಗೋಪಾಲನೂ ಕೂಡ ದುಷ್ಟ ನಿಗ್ರಹವನ್ನು ಮಾಡಿ, ಈಗ ಉಪಶಾಂತಿಯನ್ನು ಹೊಂದಿರುವನು. ವಿವೇಕವು ಪ್ರಬಲವಾದ ಮೋಹವನ್ನು ಜಯಿಸಿ ಜ್ಞಾನಕ್ಕೆ ಅಭಿವೃದ್ಧಿಯನ್ನುಂಟುಮಾಡಿದಂತೆ ಈ ಗೋಪಾಲನು, ಕರ್ಣನೆಂಬ ರಾಜನನ್ನು ಜಯಿಸಿ, ಕೀರ್ತಿವರ್ಮರಾಜನಿಗೆ ಅಭಿವೃದ್ಧಿಯನ್ನುಂಟುಮಾಡಿರುವನು.

(ತೆರೆಯಲ್ಲಿ)

ಎಲೈ ಪಾಪಿಷ್ಠನಾದ ನಟಾಧಮನೇ? ನಾವುಗಳು ಬದುಕಿರುವಾಗ ಮಹಾರಾಜನಾದ ಮಹಾಮೋಹನಿಗೆ ವಿವೇಕನಿಂದ ಪರಾಜಯವನ್ನು ಹೇಳುವೆಯಾ?

ಸೂತ್ರಧಾರ—(ತೆರೆಯ ಕಡೆ ಗಾಬರಿಯಿಂದ ನೋಡಿ) ಆರ್ಯಳೇ! ನಮ್ಮ ಮಾತಿನಲ್ಲಿ ಕೋಪಗೊಂಡ ಕಾಮನು, ಇತ್ತಕಡೆ ಬರುತ್ತಿರುವನು. ಮದವು ಏರಿ, ಇವನ ಕಣ್ಣುಗಳು ತಿರುಗುತ್ತಿರುವುದು. ರತೀದೇವಿಯು ಜೊತೆಯಲ್ಲಿರುವಳು. ಈ ಕಾಮನು, ಜಗತ್ತನ್ನೇ ಮರುಳುಗೊಳಿಸುತ್ತಿರುವನು. ನನ್ನ ಮಾತಿನಿಂದ ಇವನು ಕೋಪಗೊಂಡಂತೆ ಕಾಣುವುದು. ಆದುದರಿಂದ ನಾವು ಇಲ್ಲಿಂದ ಹೊರಟು ಹೋಗುವುದೇ ಒಳ್ಳೇದು. (ಎಂದು ಇಬ್ಬರೂ ಹೋಗುವರು.)

(ರತಿಯೂ ಕಾಮನೂ ಪ್ರವೇಶಿಸುವರು.)

ಕಾಮ—ಎಲೌ ಪಾಪಿಯೇ! ನಟಾಧಮನೇ, ನಾವು ಬದುಕಿರುವಾಗ ಮಹಾರಾಜನಾದ ಮಹಾಮೋಹನಿಗೆ, ವಿವೇಕನಿಂದ ಅಪಜಯವನ್ನು ಹೇಳುವೆಯಾ? ಶಾಸ್ತ್ರದಿಂದ ಉಂಟಾದ ವಿವೇಕವು, ವಿದ್ವಾಂಸರಿಗೆ, ಮನಸ್ಸಿನಲ್ಲಿ ಎಲ್ಲಿಯವರೆಗೆ ನಿಲ್ಲಬಲ್ಲದು? ಸ್ತ್ರೀಯರುಗಳ ಕಟಾಕ್ಷಬಾಣಗಳು ಬಿದ್ದ ಒಡನೆಯೇ ಅದು ಹಾರಿಹೋಗುವುದು. ದಿವ್ಯವಾದ ಉಪ್ಪರಿಗೆಯು, ಅಭಿನವ ಸುಂದರಿಯರು, ಭ್ರಮರದ ಝೇಂಕಾರ ಧ್ವನಿಯಿಂದ ಕೂಡಿದ ಬಳ್ಳಿಗಳು, ಅರಳಿದ ಮಲ್ಲಿಗೆಯ ವಾಸನೆಯನ್ನು ಹೊಂದಿರುವ ಶಾಲೆಯೂ, ಬೆಳದಿಂಗಳಿಂದ ಕೂಡಿದ ರಾತ್ರಿಯೂ, ಈ ವಿಧವಾದ ನನ್ನ ಅಮೋಘವಾದ ಮಿತ್ರರು ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿಕೊಂಡಿರುವಾಗ ವಿವೇಕಕ್ಕೆ ವಿಭವವೆಲ್ಲಿಯದು? ಜ್ಞಾನೋದಯವೆಲ್ಲಿಯದು?

ರತಿ—ಆರ್ಯಪುತ್ರನೇ! ನಮ್ಮ ಮಹಾರಾಜನಾದ ಮಹಾಮೋಹನ ಶತ್ರುವಾದ ವಿವೇಕನು ಪ್ರಬಲನೆಂದು ಊಹಿಸುತ್ತೇನೆ.

ಕಾಮ—ಪ್ರಿಯಳೇ! ಸ್ತ್ರೀಜಾತಿಗೆ ಸುಲಭವಾದ ಭಯವು ನಿನಗೇಕೆ ಉಂಟಾಯಿತು. ನೋಡು. ನನ್ನ ಬಾಣಗಳೂ, ಬಿಲ್ಲೂ ಸಹ ಪುಷ್ಪಮಯವಾಗಿವೆ. ಆದರೂ ದೇವಾಸುರರೊಡನೆ ಕೂಡಿದ ಈ ಪ್ರಪಂಚವೆಲ್ಲವೂ ನನ್ನ ಆಜ್ಞೆಯನ್ನು ಮೀರಿ ಒಂದು ಮುಹೂರ್ತವೂ ಧೈರ್ಯದಿಂದ ಇರಲಾರದು. ಇಂದ್ರನು ಅಹಲ್ಯೆಯಲ್ಲಿ ಆಸಕ್ತನಾದನು. ಬ್ರಹ್ಮನು ತನ್ನ ಮಗಳನ್ನು ಪರಿಗ್ರಹಿಸಿದನು. ಚಂದ್ರನು ಗುರುಪತ್ನಿಯಾದ ತಾರೆಯನ್ನು ಹೊಂದಿದನು. ಹೀಗೆ ಪ್ರಾಯಕವಾಗಿ ಯಾರುತಾನೆ ನನ್ನಿಂದ ದುರ್ಮಾರ್ಗಕ್ಕೆ ತಳ್ಳಲ್ಪಡಲಿಲ್ಲ. ನನ್ನ ಬಾಣಗಳಿಗೆ ಪ್ರಪಂಚವನ್ನು ಅಲ್ಲಾಡಿಸುವುದರಲ್ಲಿ ಶ್ರಮವೆಷ್ಟರದು?

ರತಿ—ಆರ್ಯಪುತ್ರನೇ! ನೀನು ಹೇಳುವುದು ನಿಜವೇ ಸರಿ. ಯಮ ನಿಯಮ ಮೊದಲಾದ ಮಹಾ ಬಲಿಷ್ಠರಾದ ಮಂತ್ರಿಗಳ ಸಹಾಯದಿಂದ ಕೂಡಿ

ಕೊಂಡಿರುವ ಶತ್ರುವನ್ನು ನಿಗ್ರಹಿಸುವುದು ಅಸಾಧ್ಯ. ಇದು ಪರ್ಯಾಲೋಚನೀಯವಾಗಿದೆ.

ಕಾಮ—ಪ್ರಿಯಳೆ! ಆ ವಿವೇಕನ ಮಂತ್ರಿಗಳಾದ ಯಮ ನಿಯಮಾದಿಗಳು ನಾವು ಎದುರಾದ ಒಡನೆಯೇ ವಿವೇಕನನ್ನು ಬಿಟ್ಟು ಓಡುವರು. ಕೋಪದ ಮುಂದೆ ಅಹಿಂಸೆಯು ನಿಲ್ಲಬಲ್ಲದೆ? ನನ್ನ ಮುಂದೆ ಜಿತೇಂದ್ರಿಯತ್ವವೇ ಮೊದಲಾದವುಗಳು ನಿಲ್ಲುವುದಕ್ಕೆ ಸಾಧ್ಯವೇ? ಸತ್ಯವೂ, ಪ್ರಾಮಾಣಿಕತೆಯೂ, ನಿಸ್ಪೃಹತೆಯೂ, ಲೋಭದ ಮುಂದೆ ನಿಲ್ಲುವುವೆ? ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ ಇವುಗಳು ಕೇವಲ ಶುದ್ಧ ಮನಸ್ಸಿನಿಂದ ಸಾಧಿಸತಕ್ಕವುಗಳಾದಕಾರಣ, ಇವುಗಳನ್ನು ನಾವು ಬಹಳ ಸುಲಭವಾಗಿ ನಾಶಮಾಡಬಹುದು. ಇದೂ ಅಲ್ಲದೆ ಇವುಗಳ ನಾಶಕ್ಕೆ ಸ್ತ್ರೀಯರುಗಳು ಪ್ರಧಾನರಾಗಿರುವರು. ಅವರೆಲ್ಲರೂ ನಮ್ಮ ಅಧೀನರಾಗಿಯೇ ಇಧಾರೆ. ಸ್ತ್ರೀಯರುಗಳೊಂದಿಗೆ ಸಂಭಾಷಣ, ವಿಲಾಸ, ಪರಿಹಾಸ, ವಿನೋದ, ಇವುಗಳು ಹಾಗಿರಲಿ. ಹೆಂಗಸರ ನೆನಪೇ ಮನಸ್ಸಿಗೆ ವಿಕಾರವನ್ನುಂಟುಮಾಡುವುದಕ್ಕೆ ಸಾಕಾಗಿದೆ. ಈ ವಿವೇಕನ ಮಂತ್ರಿಗಳು ನಮ್ಮ ಪ್ರಭುವಿಗೆ ಇಷ್ಟರಾದ ಮದ, ಮಾತ್ಸರ್ಯ, ಡಂಭ ಮೊದಲಾದವರಿಂದ ಪ್ರೇರಿಸಲ್ಪಟ್ಟವರಾಗಿ ನಮ್ಮ ಮಹಾರಾಜನ ಮಂತ್ರಿಯಾದ ಅಧರ್ಮನನ್ನೇ ಆಶ್ರಯಿಸುವರು.

ರತಿ—ನಿಮಗೂ ಶಮ, ದಮ, ವಿವೇಕ ಮೊದಲಾದವರಿಗೂ ಜನ್ಮಸ್ಥಾನವು ಒಂದೇ ಎಂದು ನಾನು ಕೇಳಿರುವೆನು.

ಕಾಮ—ಪ್ರಿಯಳೇ! ಜನ್ಮಸ್ಥಾನ ಒಂದೆಂಬುವುದೇನು. ನಮಗೆಲ್ಲರಿಗೂ ಒಬ್ಬನೇ ತಂದೆಯು. ಮೊದಲು ಪರಮಾತ್ಮನ ಸಂಬಂಧದಿಂದ ಮಾಯೆಯಲ್ಲಿ ಲೋಕಪ್ರಸಿದ್ಧನಾದ ಮನಸ್ಸೆಂಬ ಮಗನು ಹುಟ್ಟಿದನು. ಆ ಮನಃಪುತ್ರನು ಈ ಮೂರು ಲೋಕವನ್ನೂ ಸೃಷ್ಟಿಮಾಡಿ, ನಮ್ಮ ಉಭಯ ಕುಲವನ್ನೂ ಕೂಡ ಉಂಟುಮಾಡಿದನು. ಆ ಮನಸ್ಸೆಂಬುವನಿಗೆ, ಪ್ರವೃತ್ತಿದೇವಿ, ನಿವೃತ್ತಿದೇವಿ ಎಂಬಿಬ್ಬರು ಪತ್ನಿಯರುಂಟು. ಪ್ರವೃತ್ತಿದೇವಿಯು

ಮಹಾಮೋಹನೇ ಮೊದಲಾದ ನಮ್ಮ ಕುಲದವರಿಗೆ ಜನನಿಯು. ನಿವೃತ್ತಿ ದೇವಿಯೇ, ವಿವೇಕನೇ ಮೊದಲಾದ ಕುಲದವರಿಗೆ ಜನನಿಯು.

ರತಿ—ಆರ್ಯಪುತ್ರನೇ! ಹಾಗಾದರೆ ಅಣ್ಣ ತಮ್ಮಂದಿರಾದ ನಿಮ್ಮಗಳಿಗೇಕೆ ಇಂತಹ ವೈರವುಂಟಾಯಿತು?

ಕಾಮ—ಲೋಕದಲ್ಲಿ ಸಹೋದರರುಗಳಿಗೆ ಒಂದೇ ಪದಾರ್ಥದಲ್ಲಿ ಆಶೆ ಉಂಟಾಗೋಣನೇ ಪರಸ್ಪರ ವೈರಕ್ಕೆ ಕಾರಣ. ಹುಟ್ಟಿದಾಗ ಅಣ್ಣ ತಮ್ಮಂದರಾಗಿಯೂ, ಬೆಳೆದಹಾಗೆಲ್ಲಾ ದಾಯಾದಿಗಳಾಗಿಯೂ ಆಗುವುದು ನಿನಗೆ ಗೊತ್ತಿಲ್ಲವೆ? ಕೌರವ, ಪಾಂಡವರುಗಳಿಗೆ ಭೂಮಿಯ ನಿಮಿತ್ತವಾಗಿ ಲೋಕಕ್ಷಯಕರವಾದ ವಿರೋಧ ಉಂಟಾಗಲಿಲ್ಲವೆ? ಈ ಪ್ರಪಂಚವೆಲ್ಲವೂ ನಮ್ಮ ತಂದೆಯು ಸಂಪಾದಿಸಿದ್ದು. ನಾವು ತಂದೆಗೆ ಬಹಳ ಇಷ್ಟರಾದ್ದರಿಂದ ಪ್ರಪಂಚವನ್ನೆಲ್ಲ ನಾವು ಆಕ್ರಮಿಸಿಕೊಂಡೆವು. ಅವರ ಅಧಿಕಾರವು ಪ್ರಪಂಚದಲ್ಲಿ ಕಡಮೆಯಾಯಿತು. ಇದರಿಂದ ಆ ಪಾಪಿಗಳಾದ ವಿವೇಕಾದಿಗಳು ಈಗ ತಂದೆಯನ್ನೂ, ನಮ್ಮನ್ನೂ ಕೂಡ ನಾಶ ಮಾಡುವುದಕ್ಕೆ ಉದ್ಯುಕ್ತರಾಗಿದ್ದಾರೆ.

ರತಿ—ಅನ್ಯಾಯ! ಅನ್ಯಾಯ! ಆರ್ಯಪುತ್ರನೆ! ಕೇವಲ ದ್ವೇಷಮಾತ್ರದಿಂದ ಇಂತಹ ಪಾಪ ಕೆಲಸವನ್ನು ಅವರು ಆರಂಭಿಸಿರುವರೆ? ಈ ವಿಷಯದಲ್ಲಿ ಏನು ಮಾಡಬೇಕೆಂದು ಅವರು ಸಂಕಲ್ಪ ಮಾಡಿದಾರೆ?

ಕಾಮ—ಪ್ರಿಯಳೇ! ಇದರಲ್ಲಿ ಒಂದು ರಹಸ್ಯವುಂಟು.

ರತಿ—ಆರ್ಯಪುತ್ರನೇ! ಅದೇನು?

ಕಾಮ—ನೀನು ಹೆಂಗಸು. ಭಯಪಡುತ್ತೀಯೆ. ಆದುದರಿಂದ ಆ ರಹಸ್ಯವನ್ನು ನಿನಗೆ ತಿಳಿಸುವುದಕ್ಕೆ ಆಗುವುದಿಲ್ಲ.

ರತಿ—(ಹೆದರಿಕೆಯೊಡನೆ) ಆರ್ಯಪುತ್ರನೇ! ಅದು ಯಾವುದು? ಹೇಳು. ನಾನು ಭಯಪಡುವುದಿಲ್ಲ.

ಕಾಮ—ಪ್ರಿಯಳೇ! ಹೆದರಬೇಡ. ಹೆದರಬೇಡ. ಇದು ಅವರ ಬರೀ ಆಶೆಯೇನೆ. ಈ ನಮ್ಮ ವಂಶದಲ್ಲಿ ಕಾಳರಾತ್ರಿಗೆ ಸಮಾನವಾಗಿ ವಿದ್ಯೆ ಎಂಬ ಒಬ್ಬ ರಾಕ್ಷಸಿ ಹುಟ್ಟುವಳು ಎಂಬದಾಗಿ ಒಂದು ಪ್ರವಾದವಿದೆ.

ರತಿ—ಹಾ! ಹಾ! ಕಷ್ಟ! ಕಷ್ಟ! ನಮ್ಮ ವಂಶದಲ್ಲಿಯೂ ರಾಕ್ಷಸಿಯೇ ಎಂದು ನನ್ನ ಹೃದಯವು ನಡಗುತ್ತದೆ.

ಕಾಮ—ಪ್ರಿಯಳೇ! ಹೆದರಬೇಡ. ಹೆದರಬೇಡ. ಇದು ಕೇವಲ ಪ್ರವಾದ ಮಾತ್ರ.

ರತಿ—ಆದರೆ ಆ ರಾಕ್ಷಸಿಯು ಏನು ಮಾಡುವಳು?

ಕಾಮ—ಸಂಗರಹಿತನಾದ ಪುರುಷನ ಪತ್ನಿಯಾದ ಮಾಯೆಯು ಆ ಪುರುಷನ ಸ್ಪರ್ಶವಿಲ್ಲದೆಯೇ ಮನಸ್ಸೆಂಬ ಮಗನನ್ನು ಹೆತ್ತು ಕ್ರಮವಾಗಿ ಲೋಕವನ್ನೂ ಹೆತ್ತಳು. ಅದೇ ಮನಸ್ಸೆಂಬ ಮಗನಿಂದಲೇ ಈ ವಿದ್ಯೆಯೆಂಬ ಕನ್ಯೆಯು ಹುಟ್ಟುವಳು. ಈ ಕನ್ಯೆಯು ತಂದೆಯನ್ನೂ, ಸಹೋದರರನ್ನೂ ತಾಯಿಯನ್ನೂ, ಕೊನೆಗೆ ವಂಶವನ್ನೆಲ್ಲವನ್ನೂ ತಿಂದುಹಾಕುವಳು.

ರತಿ—(ಭಯದಿಂದ ನಡುಗುತ್ತಾ) ಆರ್ಯಪುತ್ರನೇ! ಕಾಪಾಡು. ಕಾಪಾಡು. (ಎಂದು ಭಯಭ್ರಾಂತಳಾಗುವಳು.)

ಕಾಮ—ಪ್ರಿಯಳೇ! ಹೆದರಬೇಡ. ಹೆದರಬೇಡ. ನಾವು ಬದುಕಿರುವಾಗ ವಿದ್ಯಾ ರಾಕ್ಷಸಿಯ ಉತ್ಪತ್ತಿಯು ಹೇಗೆತಾನೆ ಆಗುವುದು?

ರತಿ—ಹಾಗಾದರೆ ಆ ರಾಕ್ಷಸಿಯ ಉತ್ಪತ್ತಿಯನ್ನು ನಿಮ್ಮ ವಿರೋಧಿಗಳು ಅನುಮೋದಿಸಿರುತ್ತಾರೆಯೇ?

ಕಾಮ—ಅದಕ್ಕೇನು ಸಂದೇಹ. ಆ ರಾಕ್ಷಸಿಯು ಹುಟ್ಟುವುದಲ್ಲದೆ ವಿವೇಕನಿಂದ ಉಪನಿಷದ್ದೇವಿಯಲ್ಲಿ ಪ್ರಬೋಧ ಚಂದ್ರನೆಂಬ ತಮ್ಮನೂ ಹುಟ್ಟುವನು. ಆ ವಿಷಯದಲ್ಲಿ ಈ ಶಮದಮಾದಿಗಳೆಲ್ಲರೂ ಪ್ರಯತ್ನ ಪಡುತ್ತಿರುವರು.

ರತಿ—ಆರ್ಯಪುತ್ರನೇ! ಈ ದುರ್ವಿನೀತರು ತಮ್ಮ ವಿನಾಶಕ್ಕೆ ಕಾರಣಭೂತಳಾದ ವಿದ್ಯಾ ರಾಕ್ಷಸಿಯ ಉತ್ಪತ್ತಿಯನ್ನು ಹೇಗೆ ಅನುಮೋದಿಸುವರು?

ಕಾಮ—ಪ್ರಿಯಳೇ! ಕುಲಕ್ಷಯದಲ್ಲಿ ಉದ್ಯುಕ್ತರಾದ ಪಾಪಿಗಳಿಗೆ, ದೋಷ ವಿಚಾರವೆಲ್ಲಿದೆ. ನೋಡು. ಸ್ವಭಾವದಿಂದಲೇ ಮಲಿನರಾಗಿಯೂ, ವಕ್ರರಾಗಿಯೂ ಇರುವವರ ಜನ್ಮವು, ಜನ್ಮಸ್ಥಾನಕ್ಕೂ, ತಮಗೂ ನಾಶಕ್ಕೆ ಕಾರಣ

ಭೂತವಾದದ್ದು. ಬೆಂಕಿಯಿಂದ ಹುಟ್ಟಿದ ಹೊಗೆಯು ವಕ್ರವಾಗಿಯೂ, ಮಲಿನವಾಗಿಯೂ ಇದ್ದು, ಮೇಘಮಂಡಲವನ್ನು ವ್ಯಾಪಿಸಿ, ತನ್ನ ಜನ್ಮ ಸ್ಥಾನವಾದ ಬೆಂಕಿಯನ್ನೂ ನಾಶಮಾಡಿ, ತಾನೂ ನಾಶವಾಗುವುದಲ್ಲವೆ ? (ತೆರೆಯಲ್ಲಿ) ಎಲೌ ಪಾಪಿಯೇ ! ದುರಾತ್ಮನೆ! ನಮ್ಮನ್ನೇ ಪಾಪಿಗಳೆಂದು ಆಕ್ಷೇಪಿಸುವೆಯಾ ? ಎಲೈ ನೀಚನೆ, ಕೃತ್ಯಾಕೃತ್ಯ ವಿವೇಕಮೂಢನಾಗಿ, ಅಹಂಕಾರದಿಂದ ದುರ್ಮಾರ್ಗದಲ್ಲಿ ಪ್ರವರ್ತಿಸುವವನು ಗುರುವೇ ಆದಾಗ್ಯೂ ಅವನನ್ನು ಪರಿತ್ಯಾಗ ಮಾಡಬೇಕೆಂದು, ಶಾಸ್ತ್ರಜ್ಞರು ಹೇಳುವರು. ಈ ನಮ್ಮ ತಂದೆಯು ಅಹಂಕಾರದಿಂದ ಜಗತ್ಪತಿಯಾದ ತನ್ನ ತಂದೆಯನ್ನೇ ಬಂಧಿಸಿರುವನು. ಅದೇ ಬಂಧವನ್ನು ಮೋಹಾದಿಗಳು ಸೇರಿ ದೃಢಪಡಿಸುತ್ತಿರುವರು.

ಕಾಮ—(ತೆರೆಕಡೆ ನೋಡಿ) ಪ್ರಿಯಳೇ ! ಇವನು ನಮ್ಮ ಕುಲದಲ್ಲಿ ಜೇಷ್ಠನಾದ ವಿವೇಕನು. ತನ್ನ ಪತ್ನಿಯಾದ ಮತಿಯೊಂದಿಗೆ ಇಲ್ಲಿಗೆ ಬರುತ್ತಿರುವನು. ಇವನು ಸ್ವೇಚ್ಛಾಚಾರಿಗಳಾದ, ರಾಗದ್ವೇಷಾದಿಗಳಿಂದ ಹೆದರಿಸಲ್ಪಟ್ಟವನಂತೆ ಕೃಶಾಂಗನಾಗಿರುವನು. ಮಾನವನ್ನು ದೊಡ್ಡ ಧನವನ್ನಾಗಿ ಭಾವಿಸಿರುವನು. ರಾಗಾದಿಗಳಿಂದ ಕಲುಷಿತಳಾದ ಮತಿಯೊಂದಿಗೆ ಹಿಮ ಮುಚ್ಚಿದ ಚಂದ್ರನಂತೆ ಕಾಣುತ್ತಿರುವನು. ಇನ್ನು ಇಲ್ಲಿರುವುದು ನಮಗೆ ಸರಿಯಲ್ಲ. (ಎಂದು ಇಬ್ಬರೂ ಹೊರಟುಹೋಗುವರು.)

(ವಿವೇಕನೂ, ಮತಿಯೂ ಪ್ರವೇಶಿಸುವರು.)

ವಿವೇಕರಾಜ—(ಹಾಗೆಯೇ ಆಲೋಚಿಸಿ) ಪ್ರಿಯಳೇ ! ದುರ್ವಿನೀತನಾದ ಈ ಹುಡುಗನ ಕೊಬ್ಬಿನಿಂದುಬ್ಬಿದ ಮಾತುಗಳನ್ನು ಕೇಳಿದೆಯಾ ? ನಮ್ಮನ್ನೇ ಪಾಪಿಗಳೆಂದು ಆಕ್ಷೇಪಿಸುವನು.

ಮತಿ—ಆರ್ಯಪುತ್ರನೇ ! ಜನಗಳು ತಮ್ಮ ದೋಷಗಳನ್ನು ತಾವು ತಿಳಿದುಕೊಳ್ಳುತ್ತಾರೆಯೆ ?

ರಾಜ—ಪ್ರಿಯಳೆ ! ನೋಡು, ಅಹಂಕಾರನೇ ಮೊದಲಾದ ದುರಾತ್ಮರುಗಳು, ವಾಸನಾರೂಪಗಳಾದ ಅನೇಕ ಹಗ್ಗಗಳಿಂದ ಜ್ಞಾನಾನಂದ ಸ್ವರೂಪನಾ

ಗಿಯೂ, ಮೋಹಾವರಣವಿಲ್ಲದವನಾಗಿಯೂ, ಜಗತ್ಪ್ರಭುವಾಗಿಯೂ ಇರುವ ಪರಮಪುರುಷನನ್ನು ಬಲವಾಗಿ ಬಂಧಿಸಿ, ಮಹಾದುರವಸ್ಥೆಗೆ ಗುರಿಮಾಡಿರುವರು. ಅಂಥಾ ಈ ಜನಗಳು ಪುಣ್ಯಕೆಲಸಗಳನ್ನು ಮಾಡತಕ್ಕವರು. ಆ ಪುರುಷನನ್ನು ಬಿಡಿಸುವುದಕ್ಕೋಸ್ಕರ ಪ್ರಯತ್ನಿಸಿರುವ ನಾವುಗಳು ಪಾಪಕೆಲಸವನ್ನು ಮಾಡುವರು, ಎಂಬುವುದನ್ನು ನೋಡಿದರೆ, ದುರಾತ್ಮರುಗಳ ಔನ್ನತ್ಯವು ಹೇಗಿರುವುದೋ ಅದು ಗೊತ್ತಾಗುವುದು.

ಮತಿ—ಆರ್ಯಪುತ್ರನೆ! ಪರಮೇಶ್ವರನು ಸಹಜಾನಂದ ಸುಂದರ ಸ್ವಭಾವನೆಂತಲೂ, ನಿತ್ಯಪ್ರಕಾಶನೆಂತಲೂ, ಸರ್ವವ್ಯಾಪಕನೆಂತಲೂ ಕೇಳಿದ್ದೇನೆ. ಇಂತಹ ಪರಮೇಶ್ವರನನ್ನು ಆ ದುಷ್ಟರು ಹೇಗೆ ಬಂಧಿಸಿ ಮಹಾಮೋಹ ಸಾಗರದಲ್ಲಿ ಹಾಕಿದರು.

ರಾಜ—ಪ್ರಿಯಳೇ! ಸ್ತ್ರೀಯರ ಮೋಸಕ್ಕೆ ಒಳಗಾದ ಮನುಷ್ಯನು ಧೀರನಾದಾಗ್ಯೂ, ಶಾಂತನಾದಾಗ್ಯೂ, ನೀತಿಯನ್ನು ತಿಳಿದವನಾದಾಗ್ಯೂ, ಬುದ್ಧಿಶಾಲಿಯಾದಾಗ್ಯೂ, ಸ್ವತಂತ್ರನಾಗಿದ್ದಾಗ್ಯೂ, ಐಶ್ವರ್ಯವುಳ್ಳವನಾದಾಗ್ಯೂ ಸಹಜವಾದ ಧೈರ್ಯವನ್ನು ಕಳೆದುಕೊಳ್ಳುತ್ತಾನೆ. ಪರಮಪುರುಷನೂ ಕೂಡ ಮಾಯೆಯ ಸಹವಾಸದಿಂದ ತನ್ನನ್ನೂ ತಾನು ಮರೆತಿರುವನು.

ಮತಿ—ಆರ್ಯಪುತ್ರನೇ! ದಿವ್ಯಮಹಾಪ್ರಕಾಶ ಸಮುದ್ರನಾದ ಈಶ್ವರನಿಗೂ ಕೂಡ ಮಾಯೆಯಿಂದ ತಿರಸ್ಕಾರವೆಂಬುವುದು ಹೇಗೆತಾನೆ ನಂಬುವುದಕ್ಕಾಗುವುದು. ಕತ್ತಲೆಯಿಂದ ಸೂರ್ಯನಿಗೆ ತಿರಸ್ಕಾರವುಂಟೇ?

ರಾಜ—ಪ್ರಿಯಳೇ! ಈ ಮಾಯೆಯು ಚತುರೆಯಾದ ವೇಶ್ಯಾಸ್ತ್ರೀಯಂತೆ, ಇಲ್ಲದ ವಿಷಯಗಳೆಲ್ಲವನ್ನೂ ತೋರಿಸುತ್ತಾ ಮೋಸಮಾಡುತ್ತಿದ್ದಾಳೆ ನೋಡು. ಈಶ್ವರನು ಸ್ಫಟಿಕಮಣಿಯಂತೆ ಮಹಾಪ್ರಕಾಶವುಳ್ಳವನು. ವಿಕಾರರಹಿತನು. ಈ ನೀಚಳಾದ ಮಾಯೆಯು, ಅವನಿಗೆ ಅಸ್ವಾಭಾವಿಕವಾದ ವಿಕಾರವನ್ನುಂಟುಮಾಡುವಳು. ಇವಳ ಸಂಬಂಧದಿಂದ ಈಶ್ವರನು ಸ್ವಪ್ರಕಾಶವನ್ನು ಸ್ವಲ್ಪವೂ ಕಳೆದುಕೊಳ್ಳುವುದಿಲ್ಲ. ಆದರೂ ಈ ಮಾಯೆಯು ಅವನ ಸ್ವರೂಪಕ್ಕೆ ಹಾನಿಯನ್ನು ಅತಿಶಯವಾಗಿ ಉಂಟುಮಾಡುವುದಕ್ಕೆ

ಸಮರ್ಥಳಾಗಿರುವಳು. ಪಿಶಾಚಸ್ವಭಾವವುಳ್ಳ ಸ್ತ್ರೀಯರ ಸ್ವಭಾವಗಳೇ ಹೀಗೆ ನೋಡು. ಈ ಸ್ತ್ರೀಯರು ಮಹಾದಯೆಯುಳ್ಳವರಂತೆ ಮನುಷ್ಯರ ಹೃದಯವನ್ನು ಪ್ರವೇಶಿಸಿ ಮೋಹಗೊಳಿಸುತ್ತಾರೆ. ಸಂತೋಷಪಡಿಸುತ್ತಾರೆ. ದುಃಖಪಡಿಸುತ್ತಾರೆ. ಗದರಿಸುತ್ತಾರೆ. ಮತ್ತರನ್ನಾಗಿ ಮಾಡುತ್ತಾರೆ. ಹಾಸ್ಯಮಾಡುತ್ತಾರೆ. ಈ ಕಪಟದೃಷ್ಟಿಯುಳ್ಳ ಹೆಂಗಸರು ಏನು ತಾನೆ ಮಾಡುವುದಿಲ್ಲ ? ಇನ್ನೂ ಒಂದು ಕಾರಣವುಂಟು.

ಮತಿ—ಅದೇನು ದಯವಿಟ್ಟು ಹೇಳು.

ರಾಜ—ಈ ದುರಾಚಾರಿಣಿಯು ಯೋಚಿಸಿಕೊಂಡಿರುವುದೇನೆಂದರೆ, ನಾನು ಮುದುಕಿಯಾದೆನು. ನನ್ನ ಯೌವನವು ಕಳೆದುಹೋಯಿತು. ಇವನು ಹಳಬನಾದನು. ಸ್ವಭಾವವಾಗಿಯೇ ವಿಷಯರಸದಲ್ಲಿ ಆಶೆಯುಳ್ಳವನಲ್ಲ. ಆದ್ದರಿಂದ ತನ್ನ ಮಗನಾದ ಮನಸ್ಸನ್ನೇ ಸರ್ವೇಶ್ವರನ ಸ್ಥಾನದಲ್ಲಿ ಇರಿಸುವೆನು ಎಂದು ಯೋಚಿಸಿರುವಳು. ಈ ಮನಸ್ಸೂ ಕೂಡ ಆ ತಾಯಿಯ ಅಭಿಪ್ರಾಯವನ್ನು ತಿಳಿದು, ಅತಿ ಸಮೀಪವಾದದ್ದರಿಂದ, ಅದೇ ರೂಪವನ್ನ ಹೊಂದಿದವನಂತೆ, ನವದ್ವಾರಗಳುಳ್ಳ ಅನೇಕ ಪಟ್ಟಣಗಳನ್ನು ನಿರ್ಮಿಸಿ, ಅವುಗಳಲ್ಲಿ ಬೇರೆ ಬೇರೆಯಾಗಿ ಈಶ್ವರನನ್ನು ಇರಿಸಿದಂತೆ ಮಾಡಿ, ತನ್ನ ವ್ಯಾಪಾರವನ್ನೆಲ್ಲವನ್ನೂ ಅವನಲ್ಲಿ ಇಡುತ್ತಿದಾನೆ.

ಮತಿ—ಆಲೋಚಿಸಿ, ತಾಯಿಗೆ ತಕ್ಕ ಮಗನೇ ಹುಟ್ಟಿದನು.

ರಾಜ—ಈ ಈಶ್ವರನು ಮನಸ್ಸಿನ ಹಿರಿಯ ಮಗನಾದ ಅಹಂಕಾರದೊಡನೆ ಸೇರಿ, ತಾನು ತಿಳಿದವನಾದಾಗ್ಯೂ, ಅವಿದ್ಯಾಮಯವಾದ ನಿದ್ರೆಯನ್ನು ಹೊಂದಿ, ನಾನು ಹುಟ್ಟಿದೇನೆ. ಇವನು ನನ್ನ ತಂದೆ, ಇವಳು ನನ್ನ ತಾಯಿ, ಇದು ನನ್ನ ಭೂಮಿ, ಇವಳು ನನ್ನ ಹೆಂಡತಿ, ಇದು ನನ್ನ ಕುಲ, ಇವನು ನನ್ನ ಮಗ, ಇವನು ನನ್ನ ಸ್ನೇಹಿತ, ಇವನು ಶತ್ರು, ಇದು ನನ್ನ ಧನ, ನನ್ನ ಬಲ, ನನ್ನ ವಿದ್ಯೆ, ನನ್ನ ಬಂಧುಗಳು ಎಂದು ಮನಸ್ಸಿನ ಕಲ್ಪನೆಗಳನ್ನೆಲ್ಲ ಮತ್ತೆ ಅನುಸರಿಸುತ್ತಾ, ತನ್ನ ಸ್ವರೂಪವನ್ನು ಮರೆತು, ಬಹು ವಿಧವಾದ ಈ ಸ್ವಪ್ನಗಳನ್ನು ನೋಡುತ್ತಿದಾನೆ.

ಮತಿ—ಆರ್ಯನೇ! ಈ ದೀರ್ಘವಾದ ನಿದ್ರೆಯಿಂದ, ಈಶ್ವರನ ಪ್ರಬೋಧವೇ ಓಡಿಹೋಗುವುದು. ಹೀಗಿರಲು ಪ್ರಬೋಧನ ಉತ್ಪತ್ತಿಯು ಹೇಗೆ ಆಗುವುದು?

ರಾಜ—(ನಾಚಿಕೆಯಿಂದ ತಲೆಯನ್ನು ಬಗ್ಗಿಸಿಕೊಂಡು ನಿಲ್ಲುವನು.)

ಮತಿ—ಆರ್ಯಪುತ್ರನೇ! ನಾಚಿಕೆಯ ಭಾರದಿಂದ, ತಗ್ಗಿದ ತಲೆಯುಳ್ಳವನಾಗಿ, ಏಕೆ ಸುಮ್ಮನಾದೆ?

ರಾಜ—ಪ್ರಿಯಳೇ! ಪ್ರಾಯಕವಾಗಿ ಹೆಂಗಸರ ಮನಸ್ಸು ಅಸೂಯೆ ಪಡುವ ಸ್ವಭಾವವುಳ್ಳದ್ದು. ಆದ್ದರಿಂದ ನಾನು ಅಪರಾಧಿಯಾಗುವೆನೆಂದು ಹೆದರುತ್ತೇನೆ.

ಮತಿ—ಆರ್ಯಪುತ್ರನೇ! ಧರ್ಮವ್ಯಾಪಾರದಲ್ಲಿ ಉದ್ಯುಕ್ತನಾದ, ನ್ಯಾಯದಲ್ಲಿರುವ ಪತಿಯ ಮನಸ್ಸಿನ ಇಷ್ಟಕ್ಕೆ ವಿಘಾತ ಮಾಡುವ ಸ್ತ್ರೀಯರೇ ಬೇರೆ. ನನ್ನ ವಿಷಯದಲ್ಲಿ ಹಾಗೆ ಯೋಚನೆ ಮಾಡಬಾರದು.

ರಾಜ—ಪ್ರಿಯಳೇ! ಬಹಳಕಾಲದಿಂದಲೂ ಉಂಟಾದ ವಿರಹದಿಂದ, ಅಸೂಯೆಯುಳ್ಳ ಉಪನಿಷದ್ದೇವಿಗೂ, ನನಗೂ ಶಾಂತಿಯೇ ಮೊದಲಾದವರು ಸಂಗಮವನ್ನುಂಟುಮಾಡುವರು. ನೀನು ಮಾತ್ರ ಒಂದು ಮುಹೂರ್ತ ಕಾಲ ವಿಷಯಗಳನ್ನು ಬಿಟ್ಟು, ಸುಮ್ಮನೆ ಇರುವಿಯಾದರೆ, ಜಾಗ್ರತ್, ಸ್ವಪ್ನ, ಸುಷುಪ್ತಿ ಇವುಗಳಿಲ್ಲದಿರುವುದರಿಂದ, ಪ್ರಬೋಧೋತ್ಪತ್ತಿಯು ಆಗಿಯೇ ಆಗುವುದು.

ಮತಿ—ಆರ್ಯಪುತ್ರನೇ! ಕುಲಪ್ರಭುವಾದ ಈಶ್ವರನಿಗೆ ಬಂಧಮೋಕ್ಷವು ಆಗುವುದಾದರೆ, ಆ ಉಪನಿಷದ್ದೇವಿಯೊಂದಿಗೇನೇ, ನೀನು ಯಾವಾಗಲೂ ಸಂಬಂಧವನ್ನು ವಹಿಸಿರುವುದು ನನಗೆ ಬಹಳ ಇಷ್ಟವು.

ರಾಜ—ನೀನು ಇಷ್ಟು ಪ್ರಸನ್ನಳಾದ ಮೇಲೆ ನಮ್ಮ ಇಷ್ಟಸಿದ್ಧಿಯು ಆಗಿಯೇ ಆಗುವುದು. ಒಬ್ಬನೇ ಆದ ಪರಮೇಶ್ವರನನ್ನು ಶಾಶ್ವತನೂ, ಜಗತ್ತಿಗೆ ಅಧಿಭೂತನೂ ಎಂಬುವುದನ್ನು ಯೋಚಿಸದೆ ಭಿನ್ನಭಿನ್ನವಾಗಿ ಮಾಡಿ, ನವ

ದ್ವಾರಗಳುಳ್ಳ ಪಟ್ಟಣಗಳಿಗೆ ಹಂಚಿ, ಜನನ, ಮರಣ ಸ್ಥಾನಗಳನ್ನು ಹೊಂದಿಸಿದ ಆ ಮಹಾಮೋಹಾದಿಗಳಿಗೆ ಪ್ರತಿಕ್ರಿಯೆಯನ್ನು ಸರಿಯಾಗಿ ಮಾಡಿ, ತಿರಿಗಿಯೂ, ಆ ಪರಮೇಶ್ವರನನ್ನು ಒಬ್ಬನನ್ನಾಗಿಯೇ ಮಾಡುವೆನು. ಅದು ಇರಲಿ. ಪ್ರಕೃತದಲ್ಲಿ ಪ್ರಬೋಧೋತ್ಪತ್ತಿಗೆ ಶಮಾದಿಗಳನ್ನು ನೇಮಿಸೋಣ (ಎಂದು ಹೊರಟುಹೋಗುವರು.)

# ದ್ವಿತೀಯಾಂಕ.

## ಡಂಭನ ಪ್ರವೇಶ.

ಡಂಭ—ನಮ್ಮ ಮಹಾರಾಜನಾದ ಮಹಾಮೋಹನ ಪ್ರತಿಕಕ್ಷಿಯಾದ ವಿವೇಕನು ತನ್ನ ಮಂತ್ರಿಗಳೊಡಗೂಡಿ ಪ್ರಬೋಧೋದಯಕ್ಕೋಸ್ಕರ ಆಯಾಯ ಪುಣ್ಯತೀರ್ಥಗಳಲ್ಲಿ ಶಮ, ದಮ ಮೊದಲಾದವರನ್ನು ಕಳುಹಿಸಿಕೊಟ್ಟಿರುವನು. ಈ ವಿಷಯವನ್ನು ಅರಿತ ನಮ್ಮ ಮಹಾರಾಜನು ನನ್ನನ್ನು ಕರೆದು, ವತ್ಸ ಡಂಭ, ನಮಗೆ ಈಗ ಒದಗಿರುವ ಕುಲಕ್ಷಯಕ್ಕೆ ಪ್ರತಿಕ್ರಿಯೆಯನ್ನ ನೀವುಗಳು ಬಹಳ ಜಾಗರೂಕತೆಯಿಂದ ಮಾಡಬೇಕು. ಆ ವಿಷಯದಲ್ಲಿ ಈ ಭೂಮಿಯಲ್ಲಿ ಕಾಶೀ ಕ್ಷೇತ್ರವು ಪರಮ ಮುಕ್ತಿಕ್ಷೇತ್ರವೆಂದು ಹೆಸರುಗೊಂಡಿದೆ. ನೀನು ಅಲ್ಲಿಗೆ ಹೋಗಿ ಬ್ರಹ್ಮಚರ್ಯಾದಿ ನಾಲ್ಕು ಆಶ್ರಮಗಳಿಗೂ ಮೋಕ್ಷಕ್ಕೆ ವಿಘ್ನವನ್ನುಂಟುಮಾಡುವುದರಲ್ಲಿ ಪ್ರಯತ್ನಿಸಬೇಕೆಂದು ನನಗೆ ಆಜ್ಞಾಪಿಸಿರುವನು. ನಾನೂ ಅವನ ಅಪ್ಪಣೆಯಂತೆ ಈ ಕಾಶೀ ಕ್ಷೇತ್ರಕ್ಕೆ ಬಂದು, ಎಲ್ಲವನ್ನೂ ನನ್ನ ಸ್ವಾಧೀನಪಡಿಸಿಕೊಂಡೆನು. ಮಹಾರಾಜನ ಅಪ್ಪಣೆಯನ್ನು ನೆರವೇರಿಸಿದೆನು. ಈಗ ಇಲ್ಲಿ ನನಗೆ ಒಳಗಾಗಿರುವ ಈ ಜನಗಳು ಒಳ್ಳೇ ಬೆಳದಿಂಗಳೊಂದಿಗೆ ಕೂಡಿದ ರಾತ್ರಿಯಲ್ಲಿ ಮದ್ಯದ ವಾಸ

ನೆಯುಳ್ಳ ಮುಖದಿಂದ ಕೂಡಿದ ವೇಶ್ಯೆಯರ ಮನೆಯಲ್ಲಿ ರಾತ್ರಿಯೆಲ್ಲವೂ ದುರ್ವಿಷಯಗಳಲ್ಲಿ ಮಗ್ನರಾಗಿ, ಬೆಳಗಾದೊಡನೆಯೇ "ನಾನು ಸರ್ವಜ್ಞ, ನಾನು ದೀಕ್ಷಿತ, ನಾನು ಅಗ್ನಿಹೋತ್ರಿ, ನಾನು ಬ್ರಹ್ಮಜ್ಞಾನಿ, ನಾನು ತಾಪಸ" ಎಂದು ವಿಜೃಂಭಿಸುವ ಧೂರ್ತರುಗಳು ಜನಗಳನ್ನು ವಂಚಿಸುತ್ತಾ ಇದ್ದಾರೆ.

(ಅತ್ತಕಡೆ ನೋಡಿ) ಯಾರೋ ಒಬ್ಬ ಮಾರ್ಗಸ್ಥನು ಗಂಗೆಯನ್ನು ದಾಟಿ ಇತ್ತಕಡೆ ಬರುತ್ತಿರುವನು. ಇವನನ್ನು ನೋಡಿದರೆ, ಅಭಿಮಾನದಿಂದ ಉರಿಯುವಂತೆಯೂ, ಮೂರು ಲೋಕವನ್ನೂ ನುಂಗುವಂತೆಯೂ, ವಾಗಾಡಂಬರದಿಂದ ಜನಗಳನ್ನು ಬೆದರಿಸುವಂತೆಯೂ, ಪ್ರಜ್ಞೆಯಿಂದ ಎಲ್ಲರನ್ನೂ ಹಾಸ್ಯಮಾಡುವಂತೆಯೂ ಕಾಣುವನು. ಬಹುಶಃ ಈತನು ದಕ್ಷಿಣದೇಶದ ರಾಢಾನಗರದಿಂದ ಬಂದಿರಬಹುದೆಂದು ಊಹಿಸುತ್ತೇನೆ. ಇವನ ಮುಖದಿಂದ ನನ್ನ ಅಜ್ಜನಾದ ಅಹಂಕಾರನ ವೃತ್ತಾಂತವನ್ನು ತಿಳಿಯುವೆನು.

(ಅಹಂಕಾರನು ಪ್ರವೇಶಿಸುವನು.)

ಅಹಂಕಾರ—ಪ್ರಪಂಚವೆಲ್ಲವೂ ಶುದ್ಧ ಅಜ್ಞಾನಮಯವಾಗಿದೆ. ಪ್ರಭಾಕರ ಮತವನ್ನು ಕೇಳಿದವರೇ ಇಲ್ಲ. ಕೌಮಾರಿಲ ಶಾಸ್ತ್ರವನ್ನು ಅರಿತವರೇ ಇಲ್ಲ. ಗುರುಮತವನ್ನು ನೋಡಿಯೇ ಇಲ್ಲ. ನ್ಯಾಯಭಾಷ್ಯದ ಮಾತನ್ನು ಏನು ಹೇಳೋಣ! ವ್ಯಾಕರಣ ಮಹಾಭಾಷ್ಯವನ್ನು ಯಾರೂ ಚನ್ನಾಗಿ ಅರಿತೇ ಇಲ್ಲ. ಪಾಶುಪತ ಶಾಸ್ತ್ರವನ್ನು ನೋಡಿಯೇ ಇಲ್ಲ. ಆತ್ಮವಿಚಾರವು ಬಹು ಸೂಕ್ಷ್ಮವಾದದ್ದು. ಅನ್ಯಾಯವಾಗಿ ಇದ್ದು ಸುಮ್ಮನೆ ಕಾಲವನ್ನು ಕಳೆಯುತ್ತಾರಲ್ಲಾ! (ಒಂದು ಕಡೆ ನೋಡಿ) ಇವರು ವೈದಿಕರು ಬರೀ ವೇದಾಧ್ಯಯನ ಮಾಡುತ್ತಾ, ಅದರ ಅರ್ಥವನ್ನ ತಿಳಿಯದೆ ಒರಲುತ್ತಿರುವ ಇವರು ವೇದಜಡರಾಗಿರುತ್ತಾರೆ. (ಇನ್ನೊಂದು ಕಡೆ ಹೋಗಿ) ಇವರು ಸುಲಭವಾಗಿ ಭಿಕ್ಷೆಯು ಸಿಕ್ಕುವುದೆಂಬ ಆಶೆಯಿಂದ ತಲೆಯನ್ನು ಬೋಳಿಸಿಕೊಂಡು ಯತಿಗಳಾಗಿ, ತಮ್ಮಷ್ಟಕ್ಕೆ ತಾನೇ

ಪಂಡಿತರೆಂದು ತಿಳಿದುಕೊಂಡು, ವೇದಾಂತ ಶಾಸ್ತ್ರಕ್ಕೆ ನಿಂದೆಯನ್ನು ತರುತ್ತಲಿದಾರೆ. (ಹಾಗೆಯೇ ನಕ್ಕು) ಪ್ರತ್ಯಕ್ಷ ಪ್ರಮಾಣಕ್ಕೆ ವಿರುದ್ಧವಾದ ಸ್ವರ್ಗಾದಿಗಳನ್ನು ಹೇಳುವ ವೇದಾಂತಗಳು ಶಾಸ್ತ್ರಗಳೇ ಆಗುವ ಪಕ್ಷದಲ್ಲಿ, ಬೌದ್ಧರು ಮಾಡಿದ ಅಪರಾಧವೇನು ? ಆದ್ದರಿಂದ ಇವರೊಂದಿಗೆ ಮಾತನಾಡುವುದೂ ಕೂಡ ಪಾಪಕರವಾದದ್ದು. (ಮತ್ತೊಂದು ಕಡೆ ಹೋಗಿ ನೋಡಿ) ಈ ಶೈವರು, ಪಾಶಪತರುಗಳು ಕಷ್ಟಪಟ್ಟು ದುಸ್ತರ್ಕವನ್ನು ಅಭ್ಯಾಸ ಮಾಡುತ್ತಾ, ಕೇವಲ ಪಶುಗಳಾಗಿಯೂ, ಪಾಷಂಡರಾಗಿಯೂ, ಇರುವರು. ಇವರೊಂದಿಗೆ ಮಾತನಾಡಿದವರಿಗೂ ನರಕಪ್ರಾಪ್ತಿಯು ತಪ್ಪುವುದಿಲ್ಲ. ಇವರ ಸಹವಾಸವು ಶ್ರೇಯಸ್ಕರವಾದದ್ದಲ್ಲ. (ಮತ್ತೊಂದು ಕಡೆ ಹೋಗಿ ನೋಡಿ) ಇವರು ಗಂಗಾ ನದಿಯ ದಡದಲ್ಲಿ ತಣ್ಣಗಿರುವ ಕಲ್ಲುಗಳ ಮೇಲೆ ಕೂತುಕೊಂಡು ದರ್ಭೆಗಳನ್ನು ಹಿಡಿಹಿಡಿಯಾಗಿ ಕೈಗೆ ಜೋಡಿಸಿಕೊಂಡು, ಮಡಿಪೆಟ್ಟಗೆಗಳನ್ನು ಹತ್ತಿರ ಇಟ್ಟುಕೊಂಡು, ಧನಿಕರ ದ್ರವ್ಯವನ್ನು ಎಳೆಯುವುದಕ್ಕೋಸ್ಕರ ಕೈಯಲ್ಲಿರುವ ಜಪಸರದ ಮಣಿಗಳನ್ನು ಬೆರಳುಗಳಿಂದ ತಿರುಗಿಸುತ್ತಾ ಕುಳಿತಿರುವರು. ಇವರೆಗಿಂತಲೂ ದೊಡ್ಡ ಡಾಂಭಿಕರು ಅಪೂರ್ವ. (ಮತ್ತೊಂದು ಕಡೆ ಹೋಗಿ ನೋಡಿ) ಇವರು ತ್ರಿದಂಡ ಸನ್ಯಾಸಿಗಳು. ದ್ವೈತಾದ್ವೈತ ಮಾರ್ಗಗಳನ್ನು ಬಿಟ್ಟು ಉಭಯಭ್ರಷ್ಟರಾಗಿರುವರು. (ಮತ್ತೊಂದು ಕಡೆ ಹಾಗೆಯೇ ಹೋಗಿ ನೋಡಿ) ಇಲ್ಲಿ ಯಾರದೋ ಒಬ್ಬರ ಆಶ್ರಮವು ಕಾಣುವುದು. ಆಶ್ರಮದ ಬಾಗಿಲಲ್ಲಿ ಉದ್ದವಾದ ಬಿದರನ್ನು ನೆಟ್ಟು, ಅದರ ತುದಿಯಲ್ಲಿ ಒಗೆದ ಧೌತ ವಸ್ತ್ರಗಳನ್ನು ಹರವಿರುವರು. ಒಂದು ಕಡೆ ಕೃಷ್ಣಾಜಿನವೂ, ಒಂದು ಕಡೆ ದ್ರುಷತ್ತೂ, ಉಪಲ, ಚಮಸ, ಚಷಾಲ, ಉಲೂಖಲ, ಮುಸಲ ಈ ಯಜ್ಞಾಗಳ ಸಾಮಗ್ರಿಗಳೆಲ್ಲವೂ ಇವೆ. ಯಾವಾಗಲೂ ಅಗ್ನಿಯಲ್ಲಿ ಆಹುತಿ ಮಾಡಿದ ತುಪ್ಪದ ವಾಸನೆಯಿಂದ ಕೂಡಿದ ಹೊಗೆಯು ಆಕಾಶ ಮಂಡಲವನ್ನು ಕಪ್ಪಗೆ ಮಾಡುತ್ತಲಿದೆ. ಇದು ಯಾರದೋ ಗೃಹಸ್ಥನ ಮನೆಯಾಗಿರಬೇಕು. ಈ ಪರಿಶುದ್ಧವಾದ ಮನೆಯು ನಮಗೆ ಎರಡು ಮೂರು ದಿವಸ ವಾಸಕ್ಕೆ ಯೋಗ್ಯವಾಗಿರುವುದು ಎಂದು (ಪ್ರವೇಶಿಸಿ

ನೋಡಿ) ಆಶ್ಚರ್ಯ! ಹಣೆ, ಭುಜ, ಹೊಟ್ಟೆ, ಎದೆ, ಕತ್ತು, ತುಟಿ, ಬೆನ್ನು, ಗಡ್ಡ, ಕಪೋಲ, ಮೊಣಕಾಲು ಇವುಗಳಿಗೆಲ್ಲಾ ನಾಮವನ್ನು ಬಳಿದಿರುವನು. ತಲೆ, ಕಿವಿ, ಸೊಂಟ, ಕೈಯಿ, ಇವುಗಳಲ್ಲೆಲ್ಲಾ ದರ್ಭೆಯನ್ನು ಸಿಕ್ಕಿಸಿಕೊಂಡಿರುವನು. ಇವುಗಳನ್ನೆಲ್ಲಾ ನೋಡಿದರೆ, ಡಂಭನೇ ಮೂರ್ತಿಮತ್ತಾಗಿ ಬಂದಂತೆ ಕಾಣುತ್ತೆ, ಇರಲಿ. ಸಮೀಪಕ್ಕೆ ಹೋಗುವೆನು ಎಂದು (ಸಮೀಪಕ್ಕೆ ಹೋಗಿ) ಕಲ್ಯಾಣಮಸ್ತು! ಎಂದು ಹೇಳಿದನು.

ಡಂಭನು—ಹುಂಕಾರದಿಂದಲೇ ಇವನನ್ನು ತಡೆಯುವನು. ಅಷ್ಟರೊಳಗೆ ವಟುವು ಪ್ರವೇಶಿಸಿದನು.

ವಟು—(ಬಹಳ ಸಡಗರದೊಡನೆ) ಅಯ್ಯಾ ಬ್ರಾಹ್ಮಣ! ದೂರದಲ್ಲಿ ನಿಲ್ಲು. ಈ ಆಶ್ರಮಕ್ಕೆ ಕಾಲುಗಳನ್ನು ತೊಳೆದುಕೊಂಡು ಪ್ರವೇಶಿಸಬೇಕು.

ಅಹಂಕಾರ—(ಕೋಪದಿಂದ) ಪಾಪಿಯೇ! ನಾನು ತುರುಷ್ಕ ದೇಶಕ್ಕೆ ಬಂದೆನೇನು? ಶ್ರೋತ್ರಿಯರಾದ ಅತಿಥಿಗಳು ಬಂದರೆ, ಅರ್ಘ್ಯಪಾದ್ಯಾದಿಗಳಿಂದ ಉಪಚರಿಸುವುದಿಲ್ಲವೇ?

ಡಂಭನು—ಕೈಸನ್ನೆಯಿಂದ ಸಮಾಧಾನ ಪಡಿಸುವನು.

ವಟು—ನಮ್ಮ ಆಚಾರ್ಯರು ದೂರದೇಶದಿಂದ ಬಂದಿರುವ ತಮ್ಮ ಕುಲಶೀಲಾದಿಗಳು ನಮಗೆ ತಿಳಿಯಲಿಲ್ಲವೆಂದು ಅಪ್ಪಣೆ ಕೊಡಿಸುತ್ತಾರೆ.

ಅಹಂಕಾರ—ಏನು! ನಮ್ಮ ಕುಲಶೀಲಗಳನ್ನು ಪರೀಕ್ಷಿಸಬೇಕೋ? ಕೇಳು. ಲೋಕಪ್ರಸಿದ್ಧವಾದ ಗೌಡರಾಷ್ಟ್ರದಲ್ಲಿ ರಾಢಾನಗರವೆಂಬ ಶ್ರೇಷ್ಠವಾದ ಪಟ್ಟಣವುಂಟು. ಅಲ್ಲಿ ಮಹಾಶ್ರೇಷ್ಠವಾದ ಭೂರಿಶ್ರೇಷ್ಠನೆಂಬುವನ ಮನೆಯು ಇರುವುದು. ಅಲ್ಲಿಯೇ ಉತ್ತಮನಾದ ನಮ್ಮ ತಂದೆಯು ಇರುವನು. ಅವನ ಮಕ್ಕಳುಗಳು ಮಹಾಕುಲೀನರು. ಅವರನ್ನು ಯಾರು ತಾನೆ ತಿಳಿದಿಲ್ಲ? ಅವರುಗಳಲ್ಲಿ ಪ್ರಜ್ಞೆ, ಶೀಲ, ವಿವೇಕ, ಧೈರ್ಯ, ವಿನಯ, ಆಚಾರ ಇವುಗಳಿಂದ ನಾನು ಶ್ರೇಷ್ಠನಾಗಿರುವೆನು. (ಡಂಭನು ವಟುವನ್ನು ನೋಡುವನು.)

ವಟುವು—ತಾಂಬ್ರದ ಚಂಬನ್ನು ತಂದು ಪೂಜ್ಯರೇ, ಕಾಲುಗಳನ್ನು ತೊಳೆ
ಕೊಳ್ಳಬೇಕು.

ಅಹಂಕಾರ—ಹಾಗೆಯೇ ಯೋಚಿಸಿ, 'ಮನಸ್ಸಿನಲ್ಲಿ ಇರಲಿ. ದೋಷವೇನು
ಎಂದು ಕಾಲನ್ನು ತೊಳೆದುಕೊಂಡು. ಸಮೀಪಕ್ಕೆ ಬರುವನು.

ಡಂಭ—ಹಲ್ಲನ್ನು ಕಡಿಯುತ್ತಾ, ದೂರದಲ್ಲೇ ನಿಲ್ಲು. ನಿಮ್ಮ ದೇಹದ ಬೆವರಿ
ಹನಿಗಳು ಗಾಳಿಯಿಂದ ಹಾರಿ ಮೇಲೆ ಬಿದ್ದಾವು?

ಅಹಂಕಾರ—ಇವನು ವಿಚಿತ್ರಪುರುಷನು.

ವಟು—ಸ್ವಾಮಿ! ಇದು ನಿಶ್ಚಯ. ರಾಜರುಗಳು ಪಾದವಂದನವನ್ನು ಮಾಡ
ವುದಕ್ಕೆ ಬಂದು, ಪಾದಗಳನ್ನು ಸ್ಪರ್ಶಮಾಡದೇನೇ, ಪಾದಪೀಠವಿರು
ನೆಲದ ಸಮೀಪದಲ್ಲಿಯೇ ನಮಸ್ಕರಿಸುವರು.

ಡಂಭ—ಎಲೈ, ಬ್ರಾಹ್ಮಣೋತ್ತಮನೇ! ನಮ್ಮ ಸಂಗತಿಯು ನಿನಗೆ ತಿಳಿಯದು
ನಾನು ಪೂರ್ವದಲ್ಲಿ ಚತುರ್ಮುಖ ಬ್ರಹ್ಮನ ಮನೆಗೆ ಹೋಗಿದ್ದೆನು.
ಸಮಯದಲ್ಲಿ ಅಲ್ಲಿದ್ದ ಋಷಿಗಳೆಲ್ಲರೂ ಆಸನವನ್ನು ಬಿಟ್ಟು ತಕ್ಷಣ ಮೇ
ಕ್ಕೆದ್ದರು. ಬ್ರಹ್ಮನು ತನ್ನ ತೊಡೆಯನ್ನು ಗೋಮಯದಿಂದ ತೊಳೆದು
ಕೊಂಡು ಬಹಳ ನಿರ್ಬಂಧಪಡಿಸಿ, ನನ್ನನ್ನು ಕೂರಿಸಿಕೊಂಡನು.

ಅಹಂಕಾರ—ತನ್ನಲ್ಲಿ ತಾನು ಈ ಡಾಂಭಿಕ ಬ್ರಾಹ್ಮಣನ ಮಾತು ವಿಚಿತ್ರವಾಗಿದೆ
ಇರಲಿ! (ಕೋಪದಿಂದ) ಏನು? ಬಹಳ ಅಹಂಕಾರ ಪಡುತ್ತೀಯೆ
ಇಂದ್ರನು ಯಾವ ದೊಡ್ಡವ? ಬ್ರಹ್ಮನೇನು ಮಹಾಶುದ್ಧನು? ಋಷಿ
ಗಳೆಲ್ಲಾ ಎಲ್ಲಿ ಹುಟ್ಟಿದರು? ನನ್ನ ತಪೋಬಲದಿಂದ ನೂರು ಇಂದ್ರರು
ಳನ್ನೂ, ನೂರು ಚತುರ್ಮುಖ ಬ್ರಹ್ಮರುಗಳನ್ನೂ ಬೀಳಿಸಬಲ್ಲೆನು.

ಡಂಭ—(ಹಾಗೆಯೇ ನೋಡಿ ಸಂತೋಷದಿಂದ) ಇವನು ನಮ್ಮ ಅಜ್ಜನಾ
ಅಹಂಕಾರನು. ಪೂಜ್ಯನೇ! ಲೋಭನ ಮಗನಾದ ಡಂಭನು ನಮಸ್ಕ
ಸುತ್ತಾನೆ.

ಅಹಂಕಾರ—ವತ್ಸ! ಆಯುಷ್ಮಂತನಾಗು. ನೀನು ಹುಡುಗನಾಗಿದ್ದೆ. ನಿನ್ನನು
ದ್ವಾಪರದ ಕೊನೆಯಲ್ಲಿ ನೋಡಿದ್ದೆನು. ಇದು ಬಹುಕಾಲವಾದ್ದರಿಂದಲಾ

ನಾನು ಮುದುಕನಾದ್ದರಿಂದ ನಿನ್ನನ್ನು ಚನ್ನಾಗಿ ಗುರುತು ಹಿಡಿಯವು ದಕ್ಕಾಗಲಿಲ್ಲ. ನಿನ್ನ ಮಗನಾದ ಅನೃತನು ಕ್ಷೇಮವಾಗಿದ್ದಾನೆಯೇ?

ಡಂಭ—ಕ್ಷೇಮವಾಗಿದಾನೆ. ಮಹಾರಾಜನ ಅಪ್ಪಣೆಯಂತೆ ಅವನು ಇಲ್ಲಿಯೇ ಇರುತ್ತಾನೆ. ಅವನನ್ನು ಬಿಟ್ಟು ಒಂದು ಮುಹೂರ್ತವೂ ಬದುಕಲಾರೆನು.

ಅಹಂಕಾರ—ನಿನ್ನ ತಾಯಿಯಾದ ತೃಷ್ಣೆಯೂ, ತಂದೆಯಾದ ಲೋಭನೂ ಕ್ಷೇಮ ವಾಗಿದಾರ್ಧರೆಯೇ?

ಡಂಭ—ಅವರೂ ಇಲ್ಲಿಯೇ ಇದ್ದಾರೆ. ಅವರಿಲ್ಲದೆ ಒಂದು ಕ್ಷಣವೂ ನಿಲ್ಲ ಲಾರೆನು. ನೀವು ಯಾವ ಕೆಲಸಕ್ಕೋಸ್ಕರ ಇಷ್ಟು ದೂರ ದಯಮಾಡಿ ಸೋಣವಾಯಿತು?

ಅಹಂಕಾರ—ವತ್ಸನೇ, ಮಹಾಮೋಹನಿಗೆ ವಿವೇಕನಿಂದ ತೊಂದರೆಯುಂಟಾಗಿರು ವುದೆಂದು ಕೇಳಿದೆನು. ಆ ಮಾತು ನಿಜವೋ ಸುಳ್ಳೋ ತಿಳಿಯಬೇಕೆಂದು ಬಂದೆನು.

ಡಂಭ—ಹಾಗಾದರೆ ತಮ್ಮ ಆಗಮನದಿಂದ ಒಳ್ಳೇದೇ ಆಯಿತು. ಮಹಾರಾ ಜನೂ ಕೂಡ ಇಂದ್ರಲೋಕದಿಂದ ಇಲ್ಲಿಗೆ ಬರುವನೆಂಬ ವರ್ತಮಾನವಿದೆ. ಮತ್ತು ಈ ಕಾಶೀ ನಗರವನ್ನೇ ರಾಜಧಾನಿಯನ್ನು ಮಾಡಬೇಕೆಂದು ಅವನು ಉದ್ದೇಶ ಮಾಡಿರುವುದಾಗಿ ವರ್ತಮಾನವಿದೆ.

ಅಹಂಕಾರ—ಈ ಕಾಶಿಯಲ್ಲಿಯೇ ಮಹಾಮೋಹನು ನಿಲ್ಲುವುದಕ್ಕೆ ಕಾರಣವೇನು?

ಡಂಭ—ವಿವೇಕನಿಗೆ ತೊಂದರೆಯುಂಟುಮಾಡುವುದೇ ಕಾರಣ. ವಿದ್ಯೆಗೂ, ಜ್ಞಾ ನಕ್ಕೂ ಈ ಕಾಶೀ ಕ್ಷೇತ್ರವು ಜನ್ಮಭೂಮಿಯಾಗಿ ಇದೆ. ಆದ್ದರಿಂದ ನಮ್ಮ ಕುಲಕ್ಕೆ ನಾಶವನ್ನೇ ಅಪೇಕ್ಷಿಸುವ ವಿವೇಕನು ಈ ಕಾಶೀ ನಗರದಲ್ಲಿ ವಾಸಮಾಡುವುದಕ್ಕೆ ಉದ್ದೇಶ ಮಾಡಿರುವನು.

ಅಹಂಕಾರ—ಬಹಳ ಭಯದಿಂದ ಅದೇನೋ ಸರಿಯೇ. ಆದರೂ ಇದು ಬಹಳ ಅಸಾಧ್ಯವಾದದ್ದು. ಬ್ರಹ್ಮತತ್ವವನ್ನು ಅರಿತವರಿಗೆ ಈ ಕಾಶೀ ಕ್ಷೇತ್ರದಲ್ಲಿ ಕರುಣಾಳುವಾದ, ಪುರಹರನಾದ ಮಹಾದೇವನು ಮರಣಕಾಲದಲ್ಲಿ ಸಂಸಾರ ಭಯದಿಂದ ಹೆದರಿದವರಿಗೆ ತಾರಕ ಮಂತ್ರವನ್ನು ಉಪದೇಶಿಸು ತ್ತಾನೆ.

ಡಂಭ—ನಿಜ. ಆದರೂ ಕಾಮ ಕ್ರೋಧಗಳಿಂದ ತಿರಸ್ಕೃತರಾದವರಿಗೆ ಈ ಸಂಭವನೇ ಇಲ್ಲ.

ಶ್ಲೋ॥ ಯಸ್ಯಹಸ್ತೌಚ ಪಾದೌಚ ಮನಶ್ಚೈವ ಸುಸಂಯುತಂ |
ವಿದ್ಯಾ ತಪಶ್ಚ ಕೀರ್ತಿಶ್ಚ ಸ ತೀರ್ಥ ಫಲಮಶ್ನುತೆ ||

ಎಂದು ತೀರ್ಥ ಮಹಿಮೆಯನ್ನು ಅರಿತವರು ಹೇಳುವರು.

(ತೆರೆಯಲ್ಲಿ) ಎಲೈ ಜನಗಳಿರಾ, ಮಹಾಮೋಹ ಮಹಾರಾಜನು ಬರುತ್ತಿರುವನು. ಸ್ಫಟಿಕ ಮಣಿಮಯಗಳಾದ ಜಗಲಿಗಳನ್ನು ಗಂಧೋದಕಗಳಿಂದ ಪರಿಷ್ಕಾರ ಮಾಡಿರಿ. ಯಂತ್ರಮಾರ್ಗಗಳನ್ನು ಬಿಚ್ಚಿ ಬೀದಿಗಳೆಲ್ಲವನ್ನೂ ಅಲಂಕರಿಸಿರಿ. ಮನೆಗಳಲ್ಲಿ ಜಲಧಾರೆಗಳು ಅಲ್ಲಿ ಇಲ್ಲಿ ಪ್ರಸರಿಸಲಿ. ಮಣಿಮಯವಾದ ತೋರಣಗಳನ್ನು ಎತ್ತಿಕಟ್ಟಿರಿ. ಮನೆಗಳನ್ನ ವಿಚಿತ್ರವಾದ ಧ್ವಜಗಳಿಂದ ಅಲಂಕರಿಸಿರಿ.

ಡಂಭ—ಮಹಾರಾಜನು ಸನ್ನಿಹಿತನಾದನು. ಎದುಗೊಂಡು, ಸತ್ಕರಿಸುವುದಕ್ಕೆ ತಾವು ದಯಮಾಡೋಣಾಗಲಿ.

ಅಹಂಕಾರ—ಹಾಗೆಯೇ ಆಗಲಿ ಎಂದು ಇಬ್ಬರೂ ಹೋಗುವರು.

(ವೈಭವದೊಡನೆ ಮಹಾಮೋಹ ಮಹಾರಾಜನು ಪ್ರವೇಶಿಸುವನು.)

ಮಹಾಮೋಹ—ಮೂಢಾತ್ಮರುಗಳು ಎಷ್ಟು ಹೆಚ್ಚಿಹೋಗಿ ಇರುವರು! ದೇಹಕ್ಕಿಂತಲೂ ಬೇರೆ ಆತ್ಮನೊಂದಿದೆಯಂತೆ! ಅದು ಸ್ವರ್ಗಲೋಕಾದಿಗಳಿಗೆ ಹೋಗಿ ಫಲಗಳನ್ನು ಅನುಭವಿಸುವುದಂತೆ! ಈ ಆಶೆಯು ಆಕಾಶದಲ್ಲಿ ಇರುವ ಮರದಲ್ಲಿ ಬಿಡುವ ಹೂವಿಗಿಂತಲೂ ರುಚಿಯಾದ ಫಲವನ್ನು ಕೊಡುವುದು! ಇವರು ಸ್ವಕಪೋಲಕಲ್ಪಿತಗಳಾದ ಪದಾರ್ಥಗಳನ್ನು ಆಶ್ರಯಿಸಿ, ಈ ಪ್ರಪಂಚವನ್ನೇ ಮೋಸಗೊಳಿಸುತ್ತಾರೆ. ಯಾವ ವಸ್ತುವು ಇಲ್ಲವೋ ಅಂಥಾ ವಸ್ತು ಇದೆಯೆಂದು ಈ ಆಸ್ತಿಕರು ಹೇಳುತ್ತಾ, ಸತ್ಯವಾದಿಗಳಾದ ನಾಸ್ತಿಕರುಗಳನ್ನು ನಿಂದಿಸುತ್ತಲಿದ್ದಾರೆ. ಇವರ ಬಾಯಿಬಡಕುತನದಿಂದ ಪ್ರಪಂಚವೇ ನಾಸ್ತಿಕರನ್ನು ನಿಂದಿಸುತ್ತಲಿರುವುದು. ಈ ದೇಹವನ್ನು ಕತ್ತರಿಸಿ ನೋಡಿದಾಗ್ಯೂ ಕೂಡ ಜೀವವೆಂಬ ಪದಾರ್ಥವು ಬೇರೆ ಇದೆ ಎಂಬುವುದು ಗೊತ್ತಾಗುವುದಿಲ್ಲ. ಇವರು ಪ್ರಪಂಚವನ್ನು

ಪೋಷಗೊಳಿಸುವುದು ಮಾತ್ರವೇ ಅಲ್ಲ. ತಾವೂ ಪೋಷಪೋಗುತ್ತಾರೆ. ವಿಚಾರಮಾಡಿ ನೋಡಿರಿ. ಮುಖ, ಕೈ, ಕಾಲು ಮೊದಲಾದ ಶರೀರ ಕ್ರಮವು ಎಲ್ಲರಿಗೂ ಒಂದೇ ಸಮವಾಗಿರುವಾಗ, ಇವನು ಬ್ರಾಹ್ಮಣ, ಇವನು ಕ್ಷತ್ರಿಯ, ಇವನು ವೈಶ್ಯ, ಇವನು ಶೂದ್ರ ಎಂಬ ಕ್ರಮವು ಎಲ್ಲಿಯದು ? ಹೆಂಗಸು, ದ್ರವ್ಯ ಮೊದಲಾದವುಗಳ ವಿಷಯದಲ್ಲಿ ಇದು ಇತರರದು, ಇದು ನಮ್ಮದು ಎಂಬ ಭೇದವೇ ನಮಗೆ ತಿಳಿಯದು. ವೈದಿಕ ಹಿಂಸೆಯಲ್ಲಿಯೂ, ಕಾಲಾಕಾಲವಿಲ್ಲದೆ, ಅಕ್ರಮ ವಿಹಾರಗಳಲ್ಲಿಯೂ, ಪರ ದ್ರವ್ಯಗಳನ್ನು ತೆಗೆದುಕೊಳ್ಳುವುದರಲ್ಲಿಯೂ ಕರ್ತವ್ಯ, ಅಕರ್ತವ್ಯ ಎಂಬ ವಿಚಾರಗಳು ಕೇವಲ ನಿಷ್ಪ್ರಯೋಜನವಾದವುಗಳು. ಹೀಗಿದ್ದಾಗ್ಯೂ, ಪುರುಷಾರ್ಥಬಾಹಿರರಾದ ಈ ಆಸ್ತಿಕರು ವ್ಯರ್ಥವಾಗಿ ಇಲ್ಲದ ಕಲ್ಪನೆಗಳನ್ನೆಲ್ಲಾ ಮಾಡುವರು. (ಹಾಗೆಯೇ ಯೋಚಿಸಿ, ತಾನೇ ಶ್ಲಾಘಿಸುತ್ತಾ) ಸರ್ವ ಪ್ರಕಾರದಲ್ಲಿಯೂ ಚಾರ್ವಾಕ ಶಾಸ್ತ್ರವೇ ಶಾಸ್ತ್ರ. ಪ್ರತ್ಯಕ್ಷವೇ ಪ್ರಮಾಣ. ಈ ಮತದಲ್ಲಿ ಪೃಥ್ವೀ, ಅಪ್ಪು, ತೇಜಸ್ಸು, ವಾಯು ಈ ನಾಲ್ಕೇ ತತ್ವಗಳು. ಅರ್ಥಕಾಮಗಳೇ ಪುರುಷಾರ್ಥಗಳು. ಈ ತತ್ವಗಳು ಶರೀರವಾಗಿ ಜ್ಞಾನವನ್ನು ಹೊಂದುತ್ತವೆ. ಪರಲೋಕವಿಲ್ಲ. ಮರಣವೇ ಮೋಕ್ಷ. ಈ ಶ್ಲಾಘ್ಯವಾದ ಮತವನ್ನು ನಮ್ಮ ಅಭಿಪ್ರಾಯಕ್ಕೆ ತಕ್ಕಂತೆ ಬೃಹಸ್ಪತಿಯು ನಿರ್ಮಿಸಿ, ಚಾರ್ವಾಕನಿಗೆ ಸಮರ್ಪಿಸಿರುವನು. ಅವನ ಮೂಲಕ ಶಿಷ್ಯಪ್ರಶಿಷ್ಯಪರಂಪರೆಯಿಂದ ಈ ಲೋಕದಲ್ಲಿ ಈ ಸಿದ್ಧಾಂತವು ವಿಶೇಷವಾಗಿ ಹರಡಿರುವುದು. ಈರೀತಿಯಲ್ಲಿ ಹೇಳುತ್ತಿರುವಾಗ

(ಚಾರ್ವಾಕನು ಶಿಷ್ಯನೊಂದಿಗೆ ಪ್ರವೇಶಿಸುವನು.)

ಚಾರ್ವಾಕ—ವತ್ಸನೇ, ರಾಜನೀತಿಯೇ ವಿದ್ಯೆ. ವೇದಗಳೆಲ್ಲವೂ ವಂಚಕರ ಪ್ರಲಾಪಗಳು ನೋಡು. ಯಾಗ ಮಾಡಿದವರಿಗೆ ಮಾಡಿದವನು, ಮಾಡಿದ ಕೆಲಸವು, ಯಾಗದ್ರವ್ಯವು, ಇವುಗಳೆಲ್ಲವೂ ನಷ್ಟವಾದ ಮೇಲೆ ಸ್ವರ್ಗವು ದೊರಕುವುದು ನಿಜವಾದರೆ, ಕಾಡುಗಿಚ್ಚಿನಿಂದ ಸುಟ್ಟುಹೋದ ಮರಗಳಲ್ಲಿ ಹೆಚ್ಚು ಫಲಗಳು ಏಕೆ ಬಿಡಬಾರದು ? ಮತ್ತು ಯಜ್ಞದಲ್ಲಿ ಕೊಂದ ಪಶುವಿಗೆ ಸ್ವರ್ಗ ಉಂಟಾಗುವುದಂತೆ ! ಅದು ನಿಜವಾದ ಪಕ್ಷದಲ್ಲಿ, ಯಾಗ

ಮಾಡತಕ್ಕವನು, ತನ್ನ ತಂದೆಯನ್ನೇ ಕೊಂದು ಏಕೆ ಸ್ವರ್ಗವನ್ನು ಅವನಿಗೆ ಉಂಟುಮಾಡಬಾರದು ? ಶ್ರಾದ್ಧವು ಸತ್ತವರಿಗೆ ತೃಪ್ತಿಯನ್ನು ಉಂಟು ಮಾಡುವುದಾದರೆ, ಆರಿಹೋದ ದೀಪದಲ್ಲಿ ಎಣ್ಣೆಯು ಏಕೆ ಬೆಳಕನ್ನು ಉಂಟುಮಾಡಬಾರದು ?

ಶಿಷ್ಯ—ಆಚಾರ್ಯನೇ, ಮನುಷ್ಯನಿಗೆ ಅನ್ನಪಾನಗಳೇ ಪರಮಾರ್ಥಗಳಾಗಿದ್ದ ಪಕ್ಷದಲ್ಲಿ, ಈ ತೈರ್ಥಿಕರು ಸಂಸಾರ ಸುಖವನ್ನು ಬಿಟ್ಟು, ಪರಾಕ, ಸಾಂತಪನ ಮೊದಲಾದ ಬಹು ಕಷ್ಟವಾದ ವ್ರತಗಳಿಂದ ಏಕೆ ತಮ್ಮನ್ನು ಕ್ಲೇಶಪಡಿಸಿ ಕೊಳ್ಳುವರು ?

ಚಾರ್ವಾಕ—ವಂಚಕರು ಶಾಸ್ತ್ರಗಳನ್ನು ಮಾಡಿ, ಪ್ರಪಂಚವನ್ನು ವಂಚಿಸಿರುವರು. ಈ ರೀತಿಯಲ್ಲಿ ವಂಚಿತರಾದ ಮೂರ್ಖರುಗಳಿಗೆ ಆಶಾಮಾತ್ರದಿಂದಲೇ ತೃಪ್ತಿಯು. ನೋಡು. ಒಳ್ಳೇ ಪ್ರಾಯಸಮರ್ಥರಾದ ಸುಂದರಿಯರ ಸಹವಾಸವೆಲ್ಲಿ ? ಭಿಕ್ಷೆ, ಉಪವಾಸ, ನಿಯಮ, ಮೊದಲಾದವುಗಳಿಂದ ದೇಹವನ್ನು ಒಣಗಿಸಿಕೊಳ್ಳುವ ದುಷ್ಟವಿಧಿಯೆಲ್ಲಿ ?

ಶಿಷ್ಯ—ಆಚಾರ್ಯನೆ, ಸಂಸಾರಸುಖವು ದುಃಖಮಿಶ್ರವಾದಕಾರಣ, ಅದನ್ನು ಬಿಟ್ಟುಬಿಡಬೇಕೆಂದು ಅವರು ಹೇಳುವರಲ್ಲವೆ?

ಚಾರ್ವಾಕ—ನಕ್ಕು, ಈ ನರಪಶುಗಳ ದುರ್ಬುದ್ಧಿಯನ್ನು ಏನು ಹೇಳೋಣ. ದುಃಖದಿಂದ ಕೂಡಿದ್ದೆಂದು ವಿಷಯಸಂಗದಿಂದ ಉಂಟಾಗುವ ಸುಖವನ್ನು ತ್ಯಾಗಮಾಡುವುದು ಮೂರ್ಖನ ವಿಚಾರವಲ್ಲದೆ ಮತ್ತೇನು ? ದಿವ್ಯವಾದ ಬೆಳ್ಳಗಿರುವ ಅಕ್ಕಿಗಳಿಂದ ಕೂಡಿದ ಬತ್ತಗಳನ್ನು ಹೊಟ್ಟು ಇರುವುದೆಂದು ಯಾರಾದರೂ ಬಿಟ್ಟುಬಿಡುತ್ತಾರೆಯೇ ? ಅವರು ತಮಗೆ ಹಿತವನ್ನು ಕೋರತಕ್ಕವರೇ ?

ಮಹಾಮೋಹ—ಆಹಾ ! ಬಹು ಕಾಲದ ಮೇಲೆ ಸತ್ಪ್ರಮಾಣವಾದ ವಚನಗಳು ಕಿವಿಗೆ ಬಹಳ ಆನಂದವನ್ನು ಉಂಟುಮಾಡುತ್ತಿವೆ. (ಹಾಗೆಯೇ ನೋಡಿ ಸಂತೋಷದಿಂದ) ನಮ್ಮ ಪ್ರಿಯಸ್ನೇಹಿತನಾದ ಚಾರ್ವಾಕನಿವನು,

ಚಾರ್ವಾಕ—ನೋಡಿ, ಇಗೋ ಮಹಾರಾಜ ಮಹಾಮೋಹನು ಇಲ್ಲಿಯೇ ಇರುವನು. (ಸಮೀಪಕ್ಕೆ ಬಂದು) ಮಹಾರಾಜನಿಗೆ ಜಯವಾಗಲಿ. (ಚಾರ್ವಾಕನು ನಮಸ್ಕರಿಸುತ್ತಾನೆ.)

ಮಹಾಮೋಹ—ಚಾರ್ವಾಕನೇ ಸುಖಾಗಮನವೇ ? ಅಯ್ಯಾ ಇಲ್ಲಿ ಕುಳಿತುಕೊ.

ಚಾರ್ವಾಕ—ಕುಳಿತುಕೊಂಡು, ಇದು ಕಲಿಯು ಮಾಡಿದ ಸಾಷ್ಟಾಂಗ ಪ್ರಣಾಮವು.

ಮಹಾಮೋಹ—ಕಲಿಗೆ ಕ್ಷೇಮವೇ ?

ಚಾರ್ವಾಕ—ಮಹಾರಾಜನ ಅನುಗ್ರಹದಿಂದ ಎಲ್ಲಾ ಕಡೆಯಲ್ಲಿಯೂ ಮಂಗಳವೇನೇ. ಮಾಡಬೇಕಾದ ಕೆಲಸದ ಶೇಷವನ್ನು ಪೂರೈಸಿಕೊಂಡು, ತಮ್ಮ ಪಾದವನ್ನು ನೋಡಲು ಅಪೇಕ್ಷಿಸುತ್ತಾನೆ. ಧೊರೆಯಿಂದ ಶತ್ರುಸಂಹಾರದಲ್ಲಿ ಅಪ್ಪಣೆಯನ್ನು ಪಡೆದು, ಆ ಕೆಲಸವನ್ನು ನೆರವೇರಿಸಿ, ಸುಖವನ್ನು ಹೊಂದಿದವನಾಗಿ, ಬಹಳ ಸಂತೋಷದೊಡನೆ ಪ್ರಭುಗಳ ಪಾದಾರವಿಂದದಲ್ಲಿ ನಮಸ್ಕರಿಸತಕ್ಕವನೇ ಧನ್ಯನು.

ಮಹಾಮೋಹ—ಕಲಿಯ ಕೆಲಸವು ಎಷ್ಟುಮಟ್ಟಿಗೆ ಪೂರ್ಣವಾಯಿತು ?

ಚಾರ್ವಾಕ—ಮಹಾಜನಗಳೆಲ್ಲರೂ ವೇದಮಾರ್ಗಗಳನ್ನು ತ್ಯಾಗಮಾಡಿ, ದುರ್ವಿಷಯ, ಮದ್ಯಪಾನ, ಇವೇ ಮೊದಲಾದವುಗಳಲ್ಲಿ ನಿರತರಾಗಿದ್ದಾರೆ. ಈ ವಿಷಯದಲ್ಲಿ ಕಲಿಯ ಶಕ್ತಿಯಾಗಲಿ, ನನ್ನ ಶಕ್ತಿಯಾಗಲಿ ಯಾವುದೂ ಇಲ್ಲ. ಪ್ರಭುಗಳ ಅನುಗ್ರಹವೇ ಈ ರೀತಿಯಲ್ಲಿ ಮಾಡಿಸುತ್ತದೆ. ಅದರೊಳಗೆ ಉತ್ತರ ದೇಶೀಯರು, ಪಶ್ಚಿಮ ದೇಶೀಯರು ವೇದವನ್ನೇ ತ್ಯಾಗಮಾಡಿದ್ದಾರೆ. ಶಮದಮಾದಿಗಳ ಕಥೆಯೇ ಇಲ್ಲ. ಇತರ ಕಡೆಗಳಲ್ಲಿಯೂ ಪ್ರಾಯಕವಾಗಿ ವೇದಗಳು ಹೊಟ್ಟೇಪಾಡಿಗೇ ಆಗಿವೆ. ಹೇಡಿಗಳಾದ ಮಡ್ಡಿಗಳಿಗೆ ಜೀವಿಕಾರ್ಥವಾಗಿ ಅಗ್ನಿಹೋತ್ರವೂ, ವೇದಗಳೂ, ತ್ರಿದಂಡ ಸನ್ಯಾಸವೂ, ಭಸ್ಮಲೇಪನವೂ ಏರ್ಪಟ್ಟಿವೆಯೆಂದು ನಮ್ಮ ಗುರುಗಳಾದ ಬೃಹಸ್ಪತ್ಯಾಚಾರ್ಯರು ಹೇಳಿರುವರು. ಕುರುಕ್ಷೇತ್ರವೇ ಮೊದಲಾದವುಗಳಲ್ಲಿ ವಿದ್ಯಾಪ್ರಬೋಧೋದಯವು ಆಗುತ್ತೆಂದು ಸ್ವಪ್ನದಲ್ಲಿಯೂ ನೆನಿಸಬೇಕಾಗಿಲ್ಲ.

ಮಹಾಮೋಹ—ಸಮರ್ಪಕವಾಗಿ ಕೆಲಸವು ನಡೆದಿದೆ. ಮಹಾ ದೊಡ್ಡ ಪುಣ್ಯ ತೀರ್ಥವು ನಾಶಮಾಡಲ್ಪಟ್ಟಿತು.

ಚಾರ್ವಾಕ—ಇನ್ನೊಂದು ವಿಜ್ಞಾಪನೆಯುಂಟು.

ಮಹಾಮೋಹ—ಅದು ಯಾವುದು ?

ಚಾರ್ವಾಕ—ಮಹಾನುಭಾವಳಾದ ವಿಷ್ಣುಭಕ್ತಿ ಎಂಬ ಯೋಗಿನಿಯೊಬ್ಬಳಿರುವಳು. ಕಲಿಯು ಅವಳನ್ನ ವಿಶೇಷವಾಗಿ ಎಲ್ಲಿಯೂ ಸಂಚರಿಸದಂತೆ ಮಾಡಿರುವನು. ಆದರೂ ಅವಳ ಅನುಗ್ರಹಕ್ಕೆ ಪಾತ್ರವಾದ ಮಂಶವನ್ನು ನೋಡುವುದಕ್ಕೂ ಕೂಡ ನಮಗೆ ಸಾಮರ್ಥ್ಯವಿಲ್ಲ. ಈ ವಿಷಯದಲ್ಲಿ ತಕ್ಕ ಯೋಚನೆಯನ್ನು ಮಾಡಬೇಕು.

ಮಹಾಮೋಹ—(ಭಯದೊಂದಿಗೆ ತನ್ನಲ್ಲಿ ತಾನು) ಆ ಯೋಗಿನಿಯು ಪ್ರಸಿದ್ಧಳಾದ ಮಹಿಮೆಯುಳ್ಳವಳು. ನಮ್ಮನ್ನು ದ್ವೇಷಿಸುವುದೇ ಅವಳ ಸ್ವಭಾವ. ಅವಳನ್ನು ನಾಶಮಾಡುವುದು ಕಷ್ಟ. ಇರಲಿ. ಎಲೈ ಚಾರ್ವಾಕನೇ, ಈ ಭಯವೇನೂ ಬೇಕಾಗಿಲ್ಲ. ಕಾಮ, ಕ್ರೋಧ ಮೊದಲಾದವರು ಪ್ರತಿಭಟಿಸಿ ನಿಂತಿರುವಾಗ, ಇವಳು ಎಲ್ಲಿ ತಾನೇ ನಿಲ್ಲುವಳು ?

ಚಾರ್ವಾಕ—ಶತ್ರುವು ಅಲ್ಪನೆಂದು ಉದಾಸೀನ ಮಾಡಬಾರದು. ಮುಳ್ಳು ಸ್ವಲ್ಪವಾಗಿದ್ದಾಗ್ಯೂ, ಕಾಲಿಗೆ ತೊಂದರೆಯನ್ನುಂಟುಮಾಡದೆಬಿಡುವುದಿಲ್ಲ.

ಮಹಾಮೋಹ—ತೆರೆಯ ಕಡೆ ತಿರುಗಿ ಯಾರಲ್ಲಿ ?

(ದೌವಾರಿಕನು ಪ್ರವೇಶಿಸಿ ಆಜ್ಞಾಪಿಸಬೇಕು.)

ಮಹಾಮೋಹ—ಎಲೈ ಅಸತ್ಸಂಗನೇ, (ಕಾಮ, ಕ್ರೋಧ, ಲೋಭ, ಮದ, ಮಾನ, ಮಾತ್ಸರ್ಯ, ಇವರುಗಳಿಗೆ) ಯೋಗಿನಿಯಾದ ವಿಷ್ಣುಭಕ್ತಿಯನ್ನು ನೀವುಗಳು ಕೊಲ್ಲತಕ್ಕದ್ದೆಂದು ನಾನು ಆಜ್ಞಾಪಿಸಿದೆನೆಂದು ಹೇಳು.

ಅಪ್ಪಣೆ ಎಂದು ದೌವಾರಿಕನು ಹೊರಟು ಹೋಗುವನು.

ಒಂದು ಪತ್ರಿಕೆಯನ್ನು ಕೈಯ್ಯಲ್ಲಿ ತೆಗೆದುಕೊಂಡು ಒಬ್ಬ ಮನುಷ್ಯನು ಪ್ರವೇಶಿಸುವನು.

ಪುರುಷ—ನಾನು ಉತ್ಕಲ ದೇಶದಿಂದ ಬಂದೆನು. ಅಲ್ಲಿ ಸಮುದ್ರ ತೀರದಲ್ಲಿ ಪುರುಷೋತ್ತಮನೆಂಬ ಹೆಸರುಳ್ಳ ಒಂದು ದೇವಸ್ಥಾನವಿರುವುದು. ಅಲ್ಲಿಯ

ಪ್ರಭುಗಳಾದ ಮದ, ಮಾನ, ಇವರುಗಳು ನನ್ನನ್ನು ಮಹಾರಾಜನ ಸಮೀಪಕ್ಕೆ ಕಳುಹಿಸಿರುವರು. ಇದೇ ಕಾಶೀ ಕ್ಷೇತ್ರ. ಇದೇ ಅರಮನೆ. ಇಲ್ಲಿಯೇ ಮಹಾರಾಜನು ಚಾರ್ವಾಕನೊಂದಿಗೆ ಏನೋ ಯೋಚಿಸುತ್ತಾ ಕುಳಿತಿರುವನು.

ಸಮೀಪಕ್ಕೆ ಹೋಗಿ ಮಹಾರಾಜನಿಗೆ ಜಯವಾಗಲಿ ಎಂದು ಪತ್ರಿಕೆಯನ್ನು ಕೊಡುವನು.

ಮಹಾಮೋಹ—ಪತ್ರವನ್ನು ತೆಗೆದುಕೊಂಡು, ಎಲ್ಲಿಂದ ಬಂದೆ ?

ಪುರುಷ—ನಾನು ಪುರುಷೋತ್ತಮ ಕ್ಷೇತ್ರದಿಂದ ಬಂದಿರುವೆನು.

ಮಹಾಮೋಹ—(ಏನೋ ಕಷ್ಟ ಒದಗಿರಬೇಕು,) ಚಾರ್ವಾಕನೇ, ಮಾಡಬೇಕಾದ ಕೆಲಸಗಳಲ್ಲಿ ಬಹಳ ಜಾಗರೂಕನಾಗಿರು. ಹೋಗು.

(ಚಾರ್ವಾಕನು ಅಪ್ಪಣೆ ಎಂದು ಹೋಗುವನು.)

ಮಹಾಮೋಹನು ಪತ್ರವನ್ನು ಓದುವನು.

ಸ್ವಸ್ತಿ, ಶ್ರೀ ಕಾಶೀ ಕ್ಷೇತ್ರದಲ್ಲಿ ಮಹಾರಾಜಾಧಿರಾಜ ರಾಜಪರಮೇಶ್ವರ ಮಹಾಮೋಹ ಮಹಾರಾಜರಲ್ಲಿ ಪುರುಷೋತ್ತಮಾಯತನದಿಂದ ಮದ, ಮಾನ, ಎಂಬ ನಾವು ಇಬ್ಬರು ಸಾಷ್ಟಾಂಗ ಪ್ರಣಾಮ ಪೂರ್ವಕ ಮಾಡುವ ವಿಜ್ಞಾಪನೆಗಳು. ತಮ್ಮ ಕೃಪಾಕಟಾಕ್ಷದಿಂದ ಸರ್ವತ್ರ ಕುಶಲ. ಮತ್ತೇನೆಂದರೆ, ಶಾಂತಿದೇವಿಯು ತನ್ನ ತಾಯಿಯಾದ ಶ್ರದ್ಧೆಯೊಂದಿಗೆ ವಿವೇಕನ ದೂತಕೆಲಸದಲ್ಲಿದ್ದುಕೊಂಡು, ವಿವೇಕನೊಂದಿಗೆ ಸೇರಬೇಕೆಂದು ಉಪನಿಷದ್ದೇವಿಯನ್ನು ರಾತ್ರಿ ಹಗಲೂ ಶೋಧಿಸುತ್ತಿದಾಳೆ. ಕಾಮಸಹಚರನಾದ ಧರ್ಮನೂ ಕೂಡ ವೈರಾಗ್ಯನೇ ಮೊದಲಾದವರಿಂದ ಲಂಚವನ್ನು ತಿಂದಿರುವಂತೆ ಕಾಣುತ್ತದೆ. ಅವನು ಕಾಮನನ್ನು ಬಿಟ್ಟು, ಎಲ್ಲಿಯೋ ರಹಸ್ಯವಾಗಿ ಸಂಚರಿಸುತ್ತಿದಾನೆ. ಇದನ್ನು ತಿಳಿದು, ಮುಂದೆ ಮಾಡಬೇಕಾದ ಕೆಲಸಗಳಲ್ಲಿ ಮಹಾಸ್ವಾಮಿಯವರ ಚಿತ್ತ.

(ಪತ್ರವನ್ನು ಓದಿದ ನಂತರ ಕೋಪದಿಂದ) ಇವರು ಎಂತಹ ಮೂಢರು. ಶಾಂತಿಗೆ ಹೆದರುತ್ತಾರೆ. ಇವಳ ಸಂಭವ ತಾನೆ ಎಲ್ಲಿಯದು ? ಚತುರ್ಮುಖ ಬ್ರಹ್ಮನು ಯಾವಾಗಲೂ ಸೃಷ್ಟಿಮಾಡುವುದರಲ್ಲಿಯೇ ನಿರತನಾಗಿ

ದ್ದಾನೆ. ಅವನಿಗೆ ಶಾಂತಿಯಿಲ್ಲ. ಮಹಾದೇವನು ದಕ್ಷಾಧ್ವರವನ್ನು ಧ್ವಂಸಮಾಡಿ, ಯಾವಾಗಲೂ ಗೌರೀದೇವಿಯ ಸಹವಾಸದಿಂದ ಆನಂದಿಸುತ್ತಿದ್ದಾನೆ. ದೈತ್ಯಾರಿಯಾದ ನಾರಾಯಣನು ಯಾವಾಗಲೂ ವಕ್ಷಸ್ಥಲದಲ್ಲಿಯೇ ಲಕ್ಷ್ಮಿಯನ್ನು ಧರಿಸಿಕೊಂಡು, ಸಮುದ್ರದಲ್ಲಿ ಮಲಗಿದ್ದಾನೆ. ಇವರುಗಳಿಗೇ ಶಾಂತಿಯಿಲ್ಲದಿರುವಾಗ, ಇತರ ಪ್ರಾಣಿಗಳಿಗೆ ಶಾಂತಿಯ ಕಥೆಯೆಲ್ಲಿಯದು ? (ಪುರುಷನನ್ನು ನೋಡಿ) ನೀಚನೇ ಹೋಗು. ಜಾಗ್ರತೆಯಾಗಿ ಕಾಮನ ಸಮೀಪಕ್ಕೆ ಹೋಗಿ, ಧರ್ಮನು ಕೆಟ್ಟ ಅಭಿಪ್ರಾಯವುಳ್ಳವನಾಗಿದ್ದಾನೆಂದು ನನಗೆ ತಿಳಿದುಬಂದು ಇದೆ. ಆದ್ದರಿಂದ ಒಂದು ಮುಹೂರ್ತವೂ ಅವನಲ್ಲಿ ನಂಬಿಕೆಯನ್ನಿಡಕೂಡದು. ಅವನನ್ನು ಬಿಗಿದು ಕಟ್ಟಿ ಹಿಡಿದು ತರಬೇಕೆಂದು ನಾನು ಆಜ್ಞಾಪಿಸಿದೆನೆಂದು ತಿಳಿಸು.

(ಪುರುಷನು ಅಪ್ಪಣೆ ಎಂದು ಹೊರಟುಹೋಗುವನು.)

ಮಹಾಮೋಹ—(ತನ್ನಲ್ಲಿ ತಾನು) ಈ ಶಾಂತಿಯನ್ನು ನಿಗ್ರಹಿಸುವುದಕ್ಕೆ ಏನು ಉಪಾಯ ಮಾಡೋಣ. ಅಥವಾ ಉಪಾಯಾಂತರವೇಕೆ ? ಕ್ರೋಧಲೋಭಗಳನ್ನೇ ನೇಮಿಸಿದರೆ ಸಾಕಾಗಿರುತ್ತೆ, ಯಾರಲ್ಲಿ?

(ದೌವಾರಿಕನು ಪ್ರವೇಶಿಸಿ ಏನಪ್ಪಣೆ )

ಮಹಾಮೋಹ—ಕ್ರೋಧನನ್ನೂ, ಲೋಭನನ್ನೂ ಕರೆದುಕೊಂಡು ಬಾ.

ದೌವಾರಿಕನು ಅಪ್ಪಣೆಯೆಂದು ಹೋಗುವನು.

(ಕ್ರೋಧನೂ ಲೋಭನೂ ಪ್ರವೇಶಿಸುವರು.)

ಕ್ರೋಧ—ಶಾಂತಿ, ಶ್ರದ್ಧೆ, ವಿಷ್ಣುಭಕ್ತಿ ಇವರುಗಳು ಮಹಾರಾಜನಲ್ಲಿ ರೋಧವನ್ನು ಆಚರಿಸುವರೆಂದು ಕೇಳಿದೆನು. ಇವರುಗಳ ಈ ಚೇಷ್ಟೆಯು ಅವರ ಆತ್ಮನಾಶಕ್ಕೆ ಕಾರಣವಾಗುತ್ತದೆ. ನಾನು ಪ್ರಯತ್ನಿಸಿದರೆ, ಈ ಲೋಕವನ್ನೆಲ್ಲವನ್ನೂ ಕುರುಡಾಗಿ ಮಾಡುವೆನು. ಕಿವುಡಾಗಿ ಮಾಡುವೆನು. ಧೀರನಾಗಿಯೂ, ಜ್ಞಾನವುಳ್ಳವನಾಗಿಯೂ ಇರುವವನನ್ನು ಅಜ್ಞಾನಿಯನ್ನಾಗಿ ಮಾಡುವೆನು. ನೀತಿವಿಷಯದಲ್ಲಿ ಮಾಡಬೇಕಾದ ಕೆಲಸವನ್ನು ನೋಡದೆ ಇರುವ ಹಾಗೆ ಮಾಡುವೆನು. ತನ್ನ ಹಿತವನ್ನು ತಾನು ಕೇಳದಂತೆ ಮಾಡುವೆನು. ಬುದ್ಧಿವಂತನಾದವನು ತಾನು ಓದಿದ್ದನ್ನು ಮರೆಯುವಂತೆ ಮಾಡುವೆನು.

ಲೋಭ—ನನಗೆ ವಶವಾದವರು ತಮ್ಮ ಮನೋರಥ ನದಿಗಳ ಪರಂಪರೆಯನ್ನೇ ದಾಟಲಾರರು. ಶಾಂತಿ ಮೊದಲಾದವುಗಳನ್ನು ಚಿಂತಿಸುವುದು ಹೇಗೆ? ಅಯ್ಯೋ ಸ್ನೇಹಿತನೇ ನೋಡು. ನನಗೆ ಮದಿಸಿದ ಆನೆಗಳು ಇವೆ. ವಾಯು ವೇಗದಲ್ಲಿ ಓಡುವ ಕುದುರೆಗಳಿವೆ. ಇನ್ನೂ ಹೆಚ್ಚಾಗಿ ಸಂಪಾದಿಸುವೆನು. ಇಷ್ಟು ನನಗೆ ದೊರೆತಿದೆ. ಇನ್ನೂ ಬೇಕಾದಷ್ಟು ಶೇಖರಿಸುತ್ತೇನೆ ಎಂದು ಯೋಚಿಸುತ್ತಾ ಇದ್ದು, ಆ ಶೋಚನೆಯಿಂದ (ಜರ್ಝರವಾದ ಮನಸ್ಸುಳ್ಳ ಮನುಷ್ಯನಿಗೆ ಶಾಂತಿಯೆಲ್ಲಿಯದು ?)

ಕ್ರೋಧ—ಸಖನೇ, ನನ್ನ ಮಹಿಮೆಯನ್ನು ತಿಳಿದಿದ್ದೀಯಾ ? ಇಂದ್ರನು ತ್ವಷ್ಟೃಪುತ್ರನಾದ ವೃತ್ರಾಸುರನನ್ನು ಕೊಂದು ಬ್ರಹ್ಮಹತ್ಯೆಯನ್ನು ಮಾಡಿರುತ್ತಾನೆ. ಚಂದ್ರಾರ್ಧಶೇಖರನಾದ ಈಶ್ವರನು ಬ್ರಹ್ಮನ ತಲೆಯನ್ನು ಛೇದಿಸಿ, ಬ್ರಹ್ಮಹತ್ಯೆಯನ್ನು ಮಾಡಿದನು. ವಿಶ್ವಾಮಿತ್ರನು ವಸಿಷ್ಠರ ಮಕ್ಕಳುಗರನ್ನು ಕೊಂದು ಬ್ರಹ್ಮಹತ್ಯೆಯನ್ನು ಮಾಡಿದನು. ಹೀಗೆ ವಿದ್ಯಾವಂತರಾಗಿಯೂ, ಕೀರ್ತಿವಂತರಾಗಿಯೂ, ಸದಾಚಾರಸಂಪನ್ನರಾಗಿಯೂ, ಪೌರುಷಭೂಷಣರಾಗಿಯೂ ಇರುವವರ ಶ್ರೇಷ್ಠವಂಶಗಳೆಲ್ಲವನ್ನೂ ಒಂದು ಕ್ಷಣದಲ್ಲಿ ಹಾಳುಮಾಡುವುದರಲ್ಲಿ ನಾನು ಸಮರ್ಥನು.

ಲೋಭ—ತೃಷ್ಣೆಯೇ ಇತ್ತ ಬಾ.

ತೃಷ್ಣೆ—ಪ್ರವೇಶಿಸಿ, ಆರ್ಯಪುತ್ರನೇ ಏನಪ್ಪಣೆ.

ಲೋಭ—ಪ್ರಿಯಳೇ ಕೇಳು, ಕ್ಷೇತ್ರ, ಗ್ರಾಮ, ವನ, ಬೆಟ್ಟ, ನಗರ, ದ್ವೀಪ, ಭೂಮಂಡಲ, ಇವುಗಳ ಪ್ರತ್ಯಾಶೆಯಿಂದ ಕೂಡಿದ ಮನಸ್ಸುಳ್ಳವರಾಗಿ ಹೆಚ್ಚು ಹೆಚ್ಚಾಗಿ ಮನಸ್ಸಿನಲ್ಲಿ ಧ್ಯಾನಿಸಿರುವವರಿಗೆ ನೀನು ಪ್ರಸನ್ನಳಾಗಿ, ನಿನ್ನ ಶರೀರವನ್ನು ದೊಡ್ಡದು ಮಾಡಿಕೊಂಡರೆ, ಉಪಶಾಂತಿಯು ನಾಶವಾಗುವುದು.

ತೃಷ್ಣೆ—ಆರ್ಯಪುತ್ರನೇ, ಈ ವಿಷಯದಲ್ಲಿ ನಾನಾಗಿಯೇ ಉದ್ಯುಕ್ತಳಾಗಿದೇನೆ. ನಿನ್ನ ಅಪ್ಪಣೆಯಾದ ಮೇಲೆ ಬ್ರಹ್ಮಾಂಡಕೋಟಿಗಳಿಂದಲೂ ನನ್ನ ಹೊಟ್ಟೆಯು ತುಂಬುವುದಿಲ್ಲ.

ಕ್ರೋಧ—ಹಿಂಸೆಯೇ ಇಲ್ಲಿಬಾ.

(ಹಿಂಸೆಯು ಪ್ರವೇಶಿಸಿ, ಆರ್ಯಪುತ್ರನೆ ನಮಸ್ಕಾರ.)

ಕ್ರೋಧ—ಪ್ರಿಯಳೇ, ನೀನು ಸಹಧರ್ಮಚಾರಿಣಿಯಾಗಿರುವಾಗ, ಮಾತಾಪಿತೃವಧಗಳೂ ಕೂಡ ನನಗೆ ಈಷತ್ಕರಗಳು. (ನೋಡು) ತಾಯಿಯಾದ ಪಿಶಾಚಿಯು ಎಷ್ಟರವಳು ? ತಂದೆಯೇನು ಮಹಾ ದೊಡ್ಡವನು ! ಹುಳುಗಳಾದ ಅಣ್ಣತಮ್ಮಂದಿರು ಎಷ್ಟರವರು ! ಬಂಧುವರ್ಗವೆಲ್ಲವನ್ನೂ ಕೊಂದುಹಾಕಬೇಕು. ಈ ಜ್ಞಾತಿಗಳು ಕುಟಿಲರಾದ ವಿಟರಂತೆ ಕಪಟಸ್ನೇಹವುಳ್ಳವರು. (ಕೈಯ್ಯನ್ನು ಹಿಸುಕಿಕೊಳ್ಳುತ್ತಾ) ಈ ವಂಶವನ್ನೆಲ್ಲವನ್ನೂ ಹೊಟ್ಟೆಯೊಳಗಿರುವ ಗರ್ಭದೊಂದಿಗೆ ಸ್ವಲ್ಪವೂ ಉಳಿಯದಂತೆ ಕೊಲ್ಲುವವರೆಗೂ ಕ್ರೋಧಾಗ್ನಿಯ ಕಿಡಿಗಳು ನನ್ನ ದೇಹದಲ್ಲಿ ಶಾಂತವಾಗುವುದಿಲ್ಲ.

ಮಹಾರಾಜನು ಇಲ್ಲಿಯೇ ಇರುವನು. ಅವನ ಸಮೀಪಕ್ಕೆ ಹೋಗೋಣ. ಎಲ್ಲರೂ ಮಹಾರಾಜನ ಸಮೀಪಕ್ಕೆ ಹೋಗಿ, ಮಹಾರಾಜನಿಗೆ ಜಯವಾಗಲಿ.

ಮಹಾಮೋಹ—ಶ್ರದ್ಧೆಯ ಮಗಳಾದ ಶಾಂತಿಯು ನಮಗೆ ಪರಮದ್ವೇಷಿಣಿಯಾಗಿರುವಳು. ಅವಳನ್ನು ನೀವು ನಿಗ್ರಹಿಸಬೇಕು.

(ಎಲ್ಲರೂ ಅಪ್ಪಣೆಯೆಂದು ಹೊರಟುಹೋಗುವರು.)

ಮಹಾಮೋಹ—ಶ್ರದ್ಧೆಯ ಮಗಳು ಎಂಬುವುದರಿಂದ ಇನ್ನೊಂದು ಉಪಾಯವು ಜ್ಞಾಪಕಕ್ಕೆ ಬಂದಿತು. ಶಾಂತಿಗೆ ಶ್ರದ್ಧೆಯು ಜನನಿಯು. ಅವಳು ಪರಾಧೀನಳು. ಆದ್ದರಿಂದ ಯಾವುದಾದರೂ ಒಂದು ಉಪಾಯದಿಂದ ಶ್ರದ್ಧೆಯನ್ನು ಉಪನಿಷದ್ದೇವಿಯಿಂದ ಎಳೆದುಬಿಟ್ಟರೆ, ತಾಯಿಯ ಅಗಲಿಕೆಯಿಂದ ಸುಕುಮಾರಿಯಾದ ಶಾಂತಿಯು ದುಃಖದಿಂದ ನಾಶವಾಗುವಳು. ಶ್ರದ್ಧೆಯನ್ನು ಎಳೆಯುವುದಕ್ಕೆ ವಿಲಾಸಿನಿಯಾದ ಮಿಥ್ಯಾದೃಷ್ಟಿಯು ಸಮರ್ಥಳು. ಆದ್ದರಿಂದ ಈ ವಿಷಯದಲ್ಲಿ ಅವಳನ್ನೇ ನಿಯಮಿಸಬೇಕು. (ಪಕ್ಕಕ್ಕೆ ತಿರುಗಿ) ವಿಭ್ರಮಾವತಿಯೇ, ಮಿಥ್ಯಾದೃಷ್ಟಿಯನ್ನು ಜಾಗ್ರತೆಯಾಗಿ ಕರೆದುಕೊಂಡು ಬಾ. (ವಿಭ್ರಮಾವತಿಯು) ಅಪ್ಪಣೆಯೆಂದು ಹೋಗಿ ಮಿಥ್ಯಾದೃಷ್ಟಿಯೊಂದಿಗೆ ಪ್ರವೇಶಿಸುವಳು.

ಮಿಥ್ಯಾದೃಷ್ಟಿ—ಸಖಿಯೇ, ಮಹಾರಾಜನನ್ನ ನೋಡಿ ಬಹು ಕಾಲವಾದ್ದರಿಂದ ಹೇಗೆ ಅವನ ಮುಖವನ್ನು ನೋಡಲಿ ! ಅವನು ನನ್ನನ್ನು ಆಕ್ಷೇಪಿಸುವನೋ ಏನೋ ?

ವಿಭ್ರಮಾವತಿ—ಸಖಿಯೇ, ನಿನ್ನ ಮುಖವನ್ನು ನೋಡಿದ ಮಾತ್ರದಿಂದಲೇ ಮಹಾರಾಜನು ತನ್ನನ್ನೇ ತಾನು ಮರೆತುಬಿಡುವನು. ಇನ್ನು ಆಕ್ಷೇಪಿಸುವುದೆಲ್ಲಿ ಬಂತು ?

ಮಿಥ್ಯಾದೃಷ್ಟಿ—ಸಖಿ, ಇಲ್ಲದ ಸೌಭಾಗ್ಯವನ್ನು ನನ್ನಲ್ಲಿ ಕಲ್ಪಿಸಿ ನನ್ನನ್ನು ಹಾಸ್ಯಮಾಡುವೆಯಾ ?

ವಿಭ್ರಮಾವತಿ—ಸಖಿ, ನಿನ್ನಲ್ಲಿ ಸೌಭಾಗ್ಯವು ಇದೆಯೋ ಇಲ್ಲವೋ ಎಂಬುವುದು ಈಗಲೇ ತಿಳಿಯುವುದು. ಮತ್ತು ನಿನ್ನ ಕಣ್ಣುಗಳು ನಿದ್ರೆಯ ಭಾರವನ್ನು ವಹಿಸಿರುವಂತೆ ಕಾಣಿಸುತ್ತವೆ. ನಿನಗೆ ನಿದ್ರೆ ಇಲ್ಲದೇ ಇರುವುದಕ್ಕೆ ಕಾರಣವೇನಿರಬಹುದು ?

ಮಿಥ್ಯಾದೃಷ್ಟಿ—ಸಖಿಯೇ, ಒಬ್ಬ ಗಂಡನುಳ್ಳ ಹೆಂಗಸಿಗೇನೇ ನಿದ್ರೆಯು ದುರ್ಲಭವಾಗಿರುವಾಗ, ಸಕಲ ಲೋಕವನ್ನೂ ವಲ್ಲಭರನ್ನಾಗಿ ಮಾಡಿಕೊಂಡಿರುವ ನನಗೆ ಹೇಳತಕ್ಕದ್ದೇನು ?

ವಿಭ್ರಮಾವತಿ—ಯಾರ್ಯಾರು ನಿನ್ನ ವಲ್ಲಭರು ?

ಮಿಥ್ಯಾದೃಷ್ಟಿ—ಮಹಾರಾಜನು, ಅದರ ಮೇಲೆ ಕಾಮನು, ಕ್ರೋಧನು, ಲೋಭನು, ಅಹಂಕಾರನು. ಸುಮ್ಮನೆ ವಿವರಿಸಿಯೇನು ? ಈ ಕುಲದಲ್ಲಿ ಹುಟ್ಟಿರುವವರು ಬಾಲರಾಗಲಿ, ತರುಣರಾಗಲಿ, ಮುದುಕರಾಗಲಿ, ರಾತ್ರಿ ಹಗಲೂ ನನ್ನೊಂದಿಗೆ ವಿನೋದ ಪಡುತ್ತಿರುವರು.

ವಿಭ್ರಮಾವತಿ—ಕಾಮನಿಗೆ ರತಿಯೂ, ಕ್ರೋಧನಿಗೆ ಹಿಂಸೆಯೂ, ಲೋಭನಿಗೆ ತೃಷ್ಣೆಯೂ ವಿಶ್ವಾಸಪಾತ್ರಳಾದ ಹೆಂಡತಿಯರಿರುವರಷ್ಟೆ. ಅವರ ಗಂಡಂದರೊಂದಿಗೆ ನೀನು ನಿತ್ಯವೂ ಸೇರುತ್ತಾ ಇದ್ದರೆ, ಅವರು ನಿನ್ನಲ್ಲಿ ಹೇಗೆ ಹೊಟ್ಟೆಕಿಚ್ಚು ಪಡದೇ ಇರುವರು ?

ಮಿಥ್ಯಾದೃಷ್ಟಿ—ಹೊಟ್ಟೆಕಿಚ್ಚು ಅಂದರೇನು ? ಅವರೂ ಸಹ ನನ್ನನ್ನು ಒಂದು ನಿಮಿಷವೂ ಬಿಟ್ಟಿರುವುದಿಲ್ಲ.

ವಿಭ್ರಮಾವತಿ—ಸಖಿ, ಆದ್ದರಿಂದಲೇ ನಿನ್ನಂತೆ ಸೌಭಾಗ್ಯವತೀಯಾದ ಹೆಂಗಸು ಭೂಮಿಯಲ್ಲಿಯೇ ಇಲ್ಲ ಎಂಬದಾಗಿ ನಾನು ಹೇಳಿದ್ದು ! ಮತ್ತೇನಂದರೆ ನೀನು ಹೀಗೆ ನಿದ್ರಾಕುಲಳಾಗಿ, ತಬ್ಬಿಬ್ಬಾಗಿ ಹೆಜ್ಜೆಗಳನ್ನು ಇಡುತ್ತಾ, ಕಾಲಂದಿಗೆಯ ಝೇಂಕಾರ ಧ್ವನಿಯಿಂದ ಕೂಡಿದ ನಡಗೆಯಿಂದ ಮಹಾರಾಜನ ಸಮೀಪಕ್ಕೆ ಹೋದರೆ, ಮಹಾರಾಜನು ನಿನ್ನಲ್ಲಿ ಸಂದೇಹ ಪಡಬಹುದೆಂದು ಊಹಿಸುತ್ತೇನೆ.

ಮಿಥ್ಯಾದೃಷ್ಟಿ—ಇದರಲ್ಲಿ ಸಂದೇಹ ಪಡುವುದೇನಿದೆ ? ನಮ್ಮ ಮಹಾರಾಜನ ಕಡೆಯವರ ಸ್ವಭಾವವೇ ಇದು. ಮತ್ತು ಸಖಿಯೇ, ನಮ್ಮನ್ನು ನೋಡಿದ ಒಡನೆಯೇ ಎಲ್ಲವನ್ನೂ ಮರೆತು, ಪ್ರಸನ್ನರಾಗುವ ಪುರುಷರುಗಳಿಂದ ಭಯವೇನು ?

ಮಹಾಮೋಹ—(ನೋಡಿ) ಪ್ರಿಯಳಾದ ಮಿಥ್ಯಾದೃಷ್ಟಿಯು ಬಂದೇ ಬಂದಳು. ಮಂದಗಮನದಿಂದ ತಲೆಯಿಂದ ಜಾರುವ ಹೂವಿನ ಸರವನ್ನು ಸರಿಪಡಿಸುವ ನೆಪದಿಂದ ಕೈಯೆತ್ತಿ, ತನ್ನ ಅವಯವಗಳನ್ನು ತೋರಿಸುತ್ತಿರುವಳು. ಕನ್ನೈದಿಲೆಯ ಹೂವಿನಂತೆ ಕಪ್ಪಗಿರುವ ಕಣ್ಣಿನಿಂದ ಮನಸ್ಸನ್ನು ಆಕರ್ಷಿಸುವಂತೆ ಬರುತ್ತಿದಾಳೆ.

ವಿಭ್ರಮಾವತಿ—ಇಗೋ ಮಹಾರಾಜನು ಇಲ್ಲಿಯೇ ಇರುವನು. ಸಮೀಪಕ್ಕೆ ಹೋಗಬಹುದು.

ಮಿಥ್ಯಾದೃಷ್ಟಿ—ಸಮೀಪಕ್ಕೆ ಬಂದು ಮಹಾರಾಜನಿಗೆ ಜಯವಾಗಲಿ.

ಮಹಾಮೋಹ—ಪ್ರಿಯಳೇ, ಈಶ್ವರನಲ್ಲಿ ಪಾರ್ವತಿಯಂತೆ ನನ್ನ ಅಂಕದಲ್ಲಿ ಕುಳಿತುಕೊ.

ಮಿಥ್ಯಾದೃಷ್ಟಿ—ಹಾಗೆಯೇ ಕೂತುಕ್ಕೊಳ್ಳುವಳು.

ಮಹಾಮೋಹ—ಸಂತೋಷಭರಿತನಾದೆನು.

ಮಿಥ್ಯಾದೃಷ್ಟಿ—ಮಹಾರಾಜನೇ, ನಾನೂ ಈಗ ನವಯೌವನದಿಂದ ಕೂಡಿದವಳಾದೆನು. ಭಾವದಿಂದ ಒಡಗೂಡಿದ ಪ್ರೀತಿಯು ಎಷ್ಟು ಕಾಲವಾದರೂ ಹೋಗುವುದಿಲ್ಲ. ನನ್ನನ್ನು ಏತಕ್ಕೋಸ್ಕರ ಸ್ಮರಿಸೋಣವಾಯಿತು ? ಅಪ್ಪಣೆಯಾಗಬೇಕು.

ಮಹಾಮೋಹ—ಪ್ರಿಯಳೇ, ಮನಸ್ಸಿನಿಂದ ಹೊರಗಿರುವವರನ್ನಲ್ಲವೇ ಸ್ಮರಿಸಬೇಕು. ನೀನು ನನ್ನ ಮನಸ್ಸೆಂಬ ಗೋಡೆಯಲ್ಲಿ ಕೆತ್ತಿದ ಪುತ್ತಳಿಯಂತೆ ಪ್ರಕಾಶಿಸುತ್ತಿರುವಿ.

ಮಿಥ್ಯಾದೃಷ್ಟಿ—ಇದು ಪರಮಾನುಗ್ರಹವು. ಆದರೂ ಅಪ್ಪಣೆಯಾಗಬೇಕು.

ಮಹಾಮೋಹ—ನೀನು ಈ ರೀತಿಯಲ್ಲಿಯೇ ಸರ್ವತ್ರ ನಡೆಯಬೇಕು. ಮತ್ತು ದಾಸೀಪುತ್ರಿಯಾದ ಶ್ರದ್ಧೆಯು ವಿವೇಕನೊಂದಿಗೆ ಉಪನಿಷದ್ದೇವಿಯನ್ನು ಸೇರಿಸುವುದಕ್ಕೆ ಕುಟ್ಟಿನಿಯ ಕೆಲಸವನ್ನು ಮಾಡುತ್ತಿರುವಳು. ಆದ್ದರಿಂದ ಪಾಪಿಗಳನ್ನು ಅನುಸರಿಸಿ, ಪಾಪಿಷ್ಠಳಾದ ನಮಗೆ ಪ್ರತಿಕೂಲಳಾದ ಆ ಶ್ರದ್ಧೆಯನ್ನು ಮುಂದಲೆಯನ್ನು ಹಿಡಿದು ಎಳೆತಂದು, ಪಾಷಂಡರಲ್ಲಿ ಸೇರಿಸಿಬಿಡು.

ಮಿಥ್ಯಾದೃಷ್ಟಿ—ಈ ಅಲ್ಪ ವಿಷಯದಲ್ಲಿ ತಾವು ಯೋಚನೆ ಮಾಡಬೇಕಾದ್ದಿಲ್ಲ. ವಚನ ಮಾತ್ರದಿಂದಲೇ ಶ್ರದ್ಧೆಯು ದಾಸಿಯಾಗಿ ಆಜ್ಞಾಕಾರಿಣಿಯಾಗುವಳು. ನಾನು ಅವಳನ್ನು, ಧರ್ಮವು ಮಿಥ್ಯೆ, ಮೋಕ್ಷವು ಮಿಥ್ಯೆ, ವೇದಮಾರ್ಗವು ಮಿಥ್ಯೆ, ಸುಖಕ್ಕೆ ವಿಘ್ನವನ್ನುಂಟುಮಾಡುವ ಶಾಸ್ತ್ರಪ್ರಲಾಪಗಳು ಮಿಥ್ಯೆ, ಸ್ವರ್ಗಫಲವನ್ನು ಹೇಳುವ ವಿದ್ಯೆಯು ಮಿಥ್ಯೆ ಎಂದು ಬೋಧಿಸಿ, ಬಹು ಶೀಘ್ರವಾಗಿಯೇ ವೇದಮಾರ್ಗವನ್ನೇ ಬಿಡುವಂತೆ ಮಾಡುವೆನು. ಉಪನಿಷದ್ದೇವಿಯ ವಿಷಯವನ್ನು ಹೇಳುವುದೇನು ? ಮತ್ತು ವಿಷಯಾನಂದರಹಿತವಾದ ಮೋಕ್ಷದಲ್ಲಿ ದೋಷಗಳನ್ನ ನಾನಾವಿಧವಾಗಿ ತೋರಿಸಿ, ಶ್ರದ್ಧೆಯನ್ನು ಉಪನಿಷತ್ತಿನಿಂದಲೂ ವಿರಕ್ತಳಾಗುವಂತೆ ಜಾಗ್ರತೆಯಾಗಿಯೇ ಮಾಡುವೆನು.

ಮಹಾಮೋಹ—ಹಾಗಾದರೆ ನನಗೆ ಬಹಳ ಸಂತೋಷವನ್ನುಂಟುಮಾಡಿದಹಾಗಾಗುತ್ತೆ ಎಂದು ಹೇಳಿ, ಆಲಿಂಗಿಸಿಕ್ಕೊಳ್ಳುವನು.

ಮಿಥ್ಯಾದೃಷ್ಟಿ—ಬಹಿರಂಗವಾಗಿ ತಾವು ಹೀಗೆ ನಡೆಯುವುದನ್ನು ನೋಡಿ ನನಗೆ ಬಹಳ ನಾಚಿಕೆಯಾಗುತ್ತದೆ.

ಮಹಾಮೋಹ—ಹಾಗಾದರೆ ಅಂತಃಪುರಕ್ಕೆ ಹೋಗೋಣ ನಡೆ ಎಂದು ಎಲ್ಲರೂ ಹೊರಟು ಹೋಗುವರು.

## ತೃತೀಯಾಂಕ.

(ಶಾಂತಿಯೂ, ಕರುಣೆಯೂ ಪ್ರವೇಶಿಸುವರು.)

ಶಾಂತಿ—(ಕಣ್ಣಿನಲ್ಲಿ ನೀರನ್ನು ಸುರಿಸುತ್ತಾ,) ಹಾ ಜನನಿಯೇ ಎಲ್ಲಿರುವೆ ? ಪ್ರಿಯವಾದ ನಿನ್ನ ದರ್ಶನವನ್ನು ಕೊಡಬಾರದೇ ? ನಿರ್ಭಯವಾಗಿ ತಿರುಗುವ ಜಿಂಕೆಗಳುಳ್ಳ ವನಪ್ರದೇಶಗಳಲ್ಲಿಯೂ, ಹರಿಯುವ ನದಿಗಳುಳ್ಳ ಪರ್ವತಗಳಲ್ಲಿಯೂ, ಪುಣ್ಯಕ್ಷೇತ್ರಗಳಲ್ಲಿಯೂ, ತಪೋನಿಷ್ಠರಾದ ವೈಖಾನಸರಲ್ಲಿಯೂ ಪ್ರೇಮವುಳ್ಳ ನೀನು ಪಾಷಂಡರ ಕೈವಶವಾಗಿ, ಹೇಗೆ ಬದುಕುತ್ತೀಯೆ ? ನೀನು ಜೀವಿಸಿರುವಿ ಎಂಬ ಸಂಭವವೇ ಕಾಣುವುದಿಲ್ಲವಲ್ಲಾ ! ನನ್ನನ್ನು ನೋಡದೆ, ನೀನು ಸ್ನಾನವನ್ನು ಮಾಡುವುದಿಲ್ಲ, ಊಟಮಾಡುವುದಿಲ್ಲ, ನಾನಿಲ್ಲದೆ ನೀನು ಒಂದು ಮುಹೂರ್ತವೂ ಸುಖವಾಗಿರುವುದಿಲ್ಲ. ತಾಯಿಯಾದ ಶ್ರದ್ಧೆಯನ್ನು ಬಿಟ್ಟು, ಶಾಂತಿಯು ಬದುಕುವುದೂ ಸಹ ವಿಡಂಬನಮಾತ್ರವೇ ಆಗಿರುವುದು. ಆದ್ದರಿಂದ ಸಖಿಯೇ ಕರುಣೆಯೇ, ನನಗಾಗಿ ಒಂದು ಚಿತಿಯನ್ನು ಏರ್ಪಡಿಸು. ಅಗ್ನಿಪ್ರವೇಶವನ್ನು ಮಾಡಿ, ಶ್ರದ್ಧೆಯ ಸಹಚಾರಿಣಿಯಾಗುವೆನು.

ಕರುಣೆ—ಕಣ್ಣೀರು ಸುರಿಸುತ್ತಾ, ಸಖಿಯೇ, ಬೆಂಕಿಯ ಜ್ವಾಲೆಯಂತೆ ಕರ್ಣಕಠೋರವಾದ, ದುಸ್ಸಹವಾದ ಮಾತುಗಳಿಂದ ನನ್ನನ್ನು ಏತಕ್ಕೆ ಕೊಲ್ಲುವಿ ? ಸಮಾಧಾನಚಿತ್ತಳಾಗು. ಒಂದು ಮುಹೂರ್ತ ಕಾಲ ಪ್ರಾಣವನ್ನು ಧರಿಸಿಕೊ. ಮುನಿಜನಗಳಿಂದ ಕೂಡಿದ ಪುಣ್ಯಾಶ್ರಮಗಳಲ್ಲಿಯೂ, ಗಂಗಾತೀರಗಳಲ್ಲಿಯೂ, ಇತರ ಪ್ರದೇಶಗಳಲ್ಲಿಯೂ ಚನ್ನಾಗಿ ಹುಡುಕುತ್ತೇನೆ ಮಹಾಮೋಹನಿಂದ ಭೀತಿಗೊಂಡ ಶ್ರದ್ಧೆಯು ಎಲ್ಲಿಯೋ ಮರೆಯಾಗಿ ವಾಸಮಾಡುತ್ತಿರಬಹುದು.

ಶಾಂತಿ—ಸಖಿಯೇ, ಹುಡುಕುವುದೆಲ್ಲಿ ? ತಪಸ್ವಿಗಳಾದ ವೈಖಾನಸರಿಂದ ಕೂಡಿದ ನದಿಗಳ ದಡವೆಲ್ಲವೂ ನೋಡಿದ್ದಾಯಿತು. ಈ ಯಾಗಶೀಲರಾದ ಋಷಿಗಳ ಚಷಾಲ, ಚಮಸ ಮೊದಲಾದ ಯಜ್ಞಸಾಮಗ್ರಿಗಳಿಂದ ಕೂಡಿದ ಮನೆಗಳಲ್ಲಿ ಪ್ರತಿ ಒಂದು ಭಾಗವನ್ನೂ ನೋಡಿದ್ದಾಯಿತು. ಬ್ರಹ್ಮಚರ್ಯ,

ಗಾರ್ಹಸ್ಥ್ಯ, ವಾನಪ್ರಸ್ಥ, ಸನ್ಯಾಸಗಳೆಂಬ ನಾಲ್ಕು ಆಶ್ರಮಗಳಲ್ಲಿಯೂ ಹುಡುಕಿದ್ದಾಯಿತು. ಎಲ್ಲಿಯೂ ಶ್ರದ್ಧೆಯ ಮಾತೂ ಸಹ ಕಿವಿಗೆ ಬೀಳ ಲಿಲ್ಲ.

ಕರುಣೆ—ಸಖಿ, ಅವಳು ಸಾತ್ವಿಕಳಾದ ಕಾರಣ, ಈ ವಿಧವಾದ ದುರವಸ್ಥೆಯು ಅವಳಿಗೆ ಸಂಭವಿಸಲಾರದೆಂದು ನಾನು ಹೇಳುತ್ತೇನೆ. ಅಂತಹ ಪುಣ್ಯವತಿ ಯರಿಗೆ ಇಂಥಾ ವಿಪತ್ತು ಬರುವುದು ಅಪೂರ್ವ.

ಶಾಂತಿ—ಪುತ್ರಿಯೇ, ದೈವವು ಪ್ರತಿಕೂಲವಾದರೆ, ಯಾವುದು ತಾನೆ ಸಂಭವಿಸುವು ದಿಲ್ಲ ? ಸಾಕ್ಷಾಲ್ಲಕ್ಷ್ಮಿಯ ಅವತಾರಳಾದ ಸೀತೆಯು ರಾವಣನಾದ ರಾಕ್ಷಸನ ಬಳಿಯಲ್ಲಿ ಇರಬೇಕಾಗಿರಲಿಲ್ಲವೇ ? ಪವಿತ್ರಗಳಾದ ವೇದಗಳು ರಾಕ್ಷಸರಿಂದ ಪಾತಾಳಕ್ಕೆ ಒಯ್ಯಲ್ಪಡಲಿಲ್ಲವೇ ? ಗಂಧರ್ವರ ಮಗಳಾದ ಮದಾಲಸೆಯನ್ನು ಪಾತಾಳಕೇತುವೆಂಬ ರಾಕ್ಷಸನು ಮೋಸದಿಂದ ಕದ್ದೊ ಯ್ಯಲಿಲ್ಲವೇ ? ವಿಧಿಯ ವ್ಯಾಪಾರಗಳು ಲೋಕವಿಲಕ್ಷಣಗಳಾಗಿಯೂ, ಕುಟಿಲಗಳಾಗಿಯೂ ಇವೆ. ಮಹಾ ಕಷ್ಟ ! ಇರಲಿ. ಪಾಷಂಡಿಗಳ ಮನೆಯಲ್ಲಾದರೂ ಹುಡುಕಿ ನೋಡೋಣ.

ಕರುಣೆ—ಸಖಿಯೇ, ಇಲ್ಲಿ ಯಾವನೋ ಸನ್ಯಾಸಿಯು ಬರುತ್ತಿರುವನು.

ಶಾಂತಿ—ಇವನು ದಿಗಂಬರ ಸಿದ್ಧಾಂತವನ್ನು ವಹಿಸಿದ ಕ್ಷಪಣಕನು.

(ಕ್ಷಪಣಕನು ಪ್ರವೇಶಿಸುವನು.)

ಕ್ಷಪಣಕ—ಅರ್ಹಂತರಿಗೆ ನಮಸ್ಕಾರವು. ನವದ್ವಾರದಿಂದ ಕೂಡಿದ ಶರೀರ ದಲ್ಲಿ ಆತ್ಮನು ಮನೆಯಲ್ಲಿ ದೀಪದಂತೆ ಪ್ರಕಾಶಿಸುತ್ತಿರುವನೆಂಬುದೇ ಪರ ಮಾರ್ಥವಾದ ಜಿನಭಾಷಿತವು. ಇದು ಮೋಕ್ಷಸುಖವನ್ನು ಕೊಡುವುದು. ಎಲೈ ಶ್ರಾವಕರೇ ಕೇಳಿರಿ. ಮಲಮಯವಾದ ಈ ಶರೀರಕ್ಕೆ ಸಮಸ್ತ ತೀರ್ಥಗಳಲ್ಲಿ ಮುಳುಗುವುದರಿಂದ ಯಾವ ಶುದ್ಧಿಯುಂಟಾಗುವುದು ? ಆತ್ಮವು ನಿರ್ಮಲಸ್ವಭಾವವುಳ್ಳದ್ದಾದ ಕಾರಣ, ಅದಕ್ಕೆ ಶುದ್ಧಿಯು ಆವಶ್ಯಕ ವಿಲ್ಲವು. ಈ ವಿಷಯಗಳು ಋಷಿಗಳ ಪರಿಚರ್ಯೆಯಿಂದ ತಿಳಿದುಕೊಳ್ಳ ಬೇಕು. ಅವರನ್ನು ಕಂಡ ಕೂಡಲೆ ದೂರದಿಂದಲೇ ಅವರಿಗೆ ಸಾಷ್ಟಾಂಗ ಪ್ರಣಾಮವನ್ನು ಮಾಡಬೇಕು. ಸತ್ಕಾರಪೂರ್ವಕವಾಗಿ ಮೃಷ್ಟಾನ್ನ

ಭೋಜನವನ್ನು ಮಾಡಿಸಬೇಕು. ಅವರು ಅಪೇಕ್ಷಿಸಿದ್ದನ್ನೆಲ್ಲಾ ಕೊಡ ಬೇಕು. ಆ ವಿಷಯದಲ್ಲಿ ಹಿಂತೆಗೆಯಬಾರದು. (ತೆರೆಯ ಕಡೆ ನೋಡಿ) ಶ್ರದ್ಧೆಯೇ ಇತ್ತ ಕಡೆ ಬಾ.

ಶ್ರದ್ಧೆ—(ಪ್ರವೇಶಿಸಿ) ಏನಪ್ಪಣೆ.

(ಶಾಂತಿಯೂ, ಕರುಣೆಯೂ ಭಯದಿಂದ ನೋಡುವರು.)

ಕ್ಷಪಣಕ—ಶ್ರಾವಕರ ಕುಲವನ್ನು ಒಂದು ಮುಹೂರ್ತವೂ ಬಿಡಬೇಡ.

(ಶ್ರದ್ಧೆಯು ಅಪ್ಪಣೆಯೆಂದು ಹೊರಟು ಹೋಗುವಳು.)

ಕರುಣೆ—ಸಖಿಯೇ, ಸಮಾಧಾನವನ್ನು ಹೊಂದು. ಕೇವಲ ಹೆಸರಿನಿಂದ ಹೆದರ ಬೇಡ. ನಾನು ಅಹಿಂಸೆಯ ಮೂಲಕ ತಾಮಸೀ ಶ್ರದ್ಧೆ ಎಂಬುವಳು ಇರುವಳೆಂದು ಕೇಳಿರುವೆನು. ಆದ್ದರಿಂದ ಇವಳೇ ಅವಳಾಗಿರಬೇಕು.

ಶಾಂತಿ—(ಸಮಾಧಾನವನ್ನು ತಂದುಕೊಂಡು) ಸಖಿಯೇ, ಇದು ನಿಜ. ಸದಾ ಚಾರಳಾಗಿಯೂ, ಪ್ರಿಯದರ್ಶನಗಳಾಗಿಯೂ ಇರುವ ನನ್ನ ಜನನಿಗೆ ಈ ಶ್ರದ್ಧೆಯು ಎಂದಿಗೂ ಸರಿಹೋಗಲಾರಳು. ಬೌದ್ಧರಲ್ಲಿ ಹುಡುಕೋಣ.

(ಪುಸ್ತಕಹಸ್ತನಾದ ಭಿಕ್ಷುವು ಪ್ರವೇಶಿಸುವನು.)

ಭಿಕ್ಷು—ಎಲೈ ಉಪಾಸಕರುಗಳಿರಾ, ಘಟಾದಿ ಪದಾರ್ಥಗಳೆಲ್ಲವೂ ಕ್ಷಣಭಂಗುರ ಗಳು. ರೂಪರಹಿತಗಳು ವಿಜ್ಞಾನ ಸಂತತಿಯಲ್ಲಿ ಕಲ್ಪಿತಗಳಾಗಿ, ಪ್ರತ್ಯ ಕ್ಷಗಳಂತೆ ಹೊರಗೆ ಕಾಣುತ್ತವೆ. ಇವುಗಳೆಲ್ಲವೂ ಮಿಥ್ಯೆಗಳು. ಜ್ಞಾನ ದಸೆಯಲ್ಲಿ ಸಮಸ್ತ ವಾಸನೆಗಳೂ ಕಳೆದುಹೋಗಿ, ಘಟಾದಿ ವಿಷಯಗಳ ಸಂಬಂಧ ಶೂನ್ಯವಾಗಿ, ಕೇವಲ ವಿಜ್ಞಾನ ಸಂತತಿಯೇ ಪ್ರಕಾಶಿಸುವುದು. (ಈ ರೀತಿಯಲ್ಲಿ ಹೇಳುತ್ತಾ) ಆಹಾ ! ಈ ಸೌಗತ ಧರ್ಮವೇ ಶ್ರೇಷ್ಠ ವಾದ ಧರ್ಮವು. ಇದರಲ್ಲಿ ಸೌಖ್ಯವೂ, ಮೋಕ್ಷವೂ ಎರಡೂ ಇವೆ. ವೈದಿಕ ಮತದಲ್ಲಿ ಭೋಗವಿದ್ದರೆ ಮೋಕ್ಷವಿಲ್ಲ. ಮೋಕ್ಷವಿದ್ದರೆ ಭೋಗ ವಿಲ್ಲ. ನಮ್ಮ ಧರ್ಮದಲ್ಲಿಯಾದರೋ ವಾಸಮಾಡುವುದಕ್ಕೆ ಸುಂದರ ವಾದ ಮನೆಯೂ, ಮನಸ್ಸಿಗೆ ಇಷ್ಟವಾದ ಭೋಜನವೂ, ಮೆತ್ತಗಿರುವ ಹಾಸಿಗೆಗಳೂ ಇವೆ. ನಮಗೆ ದಿವ್ಯವಾದ ಬೆಳದಿಂಗಳಿನಿಂದ ಕೂಡಿದ ರಾತ್ರಿಗಳೆಲ್ಲವೂ ಆಪ್ತರಾದ ಮಿತ್ರರೊಡನೆ ವಿಹಾರಗಳಲ್ಲಿ ಕಳೆಯಲ್ಪಡು ತ್ತವೆ.

ಕರುಣೆ—ಸಖಿಯೇ, ತಾಳೇ ಮರದಂತೆ ಉನ್ನತನಾಗಿ, ಕಾಷಾಯದ ಅಂಗಿಯನ್ನು ಹಾಕಿಕೊಂಡು ಬರುತ್ತಿರುವ ಇವನು ಯಾರು ?

ಶಾಂತಿ—ಸಖಿ, ಇವನು ಬೌದ್ಧಸಿದ್ಧಾಂತಿಯು.

ಭಿಕ್ಷು—ಎಲೈ ಉಪಾಸಕರುಗಳಿರಾ, ಭಿಕ್ಷುಗಳಿರಾ, ಪೂಜ್ಯನಾದ ಸುಗತನ ವಚನಾಮೃತವನ್ನು ಕೇಳಿರಿ. (ಪುಸ್ತಕವನ್ನು ಓದುವನು.) ನಾನು ದಿವ್ಯದೃಷ್ಟಿಯಿಂದ ಜನಗಳ ಸುಗತಿ, ದುರ್ಗತಿಗಳನ್ನು ನೋಡುತ್ತಲಿದೇನೆ. ಎಲ್ಲಾ ಸಂಸ್ಕಾರಗಳೂ ಕ್ಷಣಿಕಗಳು. ಆತ್ಮನು ಚಿರಸ್ಥಾಯಿಯಲ್ಲವು. ಅಸೂಯೆ ಎಂಬುವುದು ಮನಸ್ಸಿನ ದೋಷವು. (ತೆರೆಯ ಕಡೆ ತಿರುಗಿ) ಶ್ರದ್ಧೆಯೇ ಇತ್ತ ಬಾ.

ಶ್ರದ್ಧೆ—(ಪ್ರವೇಶಿಸಿ) ಏನಪ್ಪಣೆ.

ಭಿಕ್ಷು—ಉಪಾಸಕರುಗಳನ್ನೂ, ಭಿಕ್ಷುಗಳನ್ನೂ ಬಿಡದೆ ಸತ್ಕರಿಸು.

ಶ್ರದ್ಧೆ—ಅಪ್ಪಣೆ.

(ಈ ರೀತಿಯಲ್ಲಿ ಹೇಳಿ ಹೋಗುವಳು.)

ಶಾಂತಿ—ಸಖಿಯೇ, ಇವಳೂ ತಾಮಸ ಶ್ರದ್ಧೆಯಾಗಿರಬೇಕು.

ಕರುಣೆ—ಹೌದು.

ಕ್ಷಪಣಕ—(ಭಿಕ್ಷುವನ್ನು ನೋಡಿ ಗಟ್ಟಿಯಾಗಿ) ಎಲೈ ಭಿಕ್ಷುಕನೇ, ಇಲ್ಲಿ ಬಾ. ನಿನ್ನನ್ನು ಸ್ವಲ್ಪ ಪ್ರಶ್ನೆಮಾಡಬೇಕೆಂದಿದೇನೆ.

ಭಿಕ್ಷು—ಏನು ಕೇಳುತ್ತೀಯೆ ಕೇಳು.

ಕ್ಷಪಣಕ—ಕೋಪಿಸಿಕೊಳ್ಳಬೇಡ. ಶಾಸ್ತ್ರವಿಷಯವನ್ನು ಪ್ರಶ್ನೆಮಾಡುವೆನು.

ಭಿಕ್ಷು—ಶಾಸ್ತ್ರದ ಕಥೆಯೂ ನಿನಗೆ ಗೊತ್ತಿರುವುದೇ ? ನೋಡೋಣ (ಎಂದು ಸಮೀಪಕ್ಕೆ ಬಂದು) ಏನು ಕೇಳುವಿ ?

ಕ್ಷಪಣಕ—ಒಂದು ಕ್ಷಣದಲ್ಲಿ ನಾಶಹೊಂದುವ ನೀನು ಏತಕ್ಕೋಸ್ಕರ ಈ ವ್ರತವನ್ನು ಧರಿಸಿರುತ್ತೀಯೆ ಹೇಳು.

ಭಿಕ್ಷು—ಕೇಳು. ನಮ್ಮ ಸಂತತಿಗೆ ಸೇರಿದ ಒಂದು ವಿಜ್ಞಾನ ಕ್ಷಣವು ವಾಸನಾರಹಿತವಾಗಿ ಮೋಕ್ಷವನ್ನು ಹೊಂದುವುದು.

ಕ್ಷಪಣಕ—ಅಯ್ಯೋ ಮೂರ್ಖನೇ, ಯಾವುದೋ ಒಂದು ಮನ್ವಂತರದಲ್ಲಿ ಯಾ
ವನೋ ಒಬ್ಬನು ಮುಕ್ತನಾದರೆ, ಈಗಲೇ ನಾಶವಾಗಿ ಹೋದ ನಿನಗೆ
ಅವನು ಏನು ಉಪಕಾರವನ್ನು ಮಾಡಬಲ್ಲನು ? ಅದು ಹಾಗಿರಲಿ. ಈ
ಧರ್ಮವನ್ನು ನಿನಗೆ ಯಾರು ಉಪದೇಶ ಮಾಡಿದರು ?

ಭಿಕ್ಷು—ಸರ್ವಜ್ಞನಾದ ಭಗವಾನ್ ಬುದ್ಧನು ಈ ಧರ್ಮವನ್ನು ಹೇಳಿರುವನು.

ಕ್ಷಪಣಕ—ಬುದ್ಧನು ಸರ್ವಜ್ಞನೆಂದು ನಿನಗೆ ಹೇಗೆ ತಿಳಿಯಿತು ?

ಭಿಕ್ಷು—ಅವನ ಆಗಮನದಿಂದಲೇ ಬುದ್ಧನು ಸರ್ವಜ್ಞನೆಂದು ಗೊತ್ತಾಗುತ್ತದೆ.

ಕ್ಷಪಣಕ—ಅಯ್ಯೋ ದುರ್ಬುದ್ಧಿಯೇ, ಅವನ ಮಾತಿನಿಂದ ಅವನು ಸರ್ವಜ್ಞ
ನೆಂದು ನೀನು ತಿಳಿದುಕೊಳ್ಳುವುದಾದರೆ, ನಾನೂ ಸರ್ವಜ್ಞ. ನನಗೆ ನೀನೂ,
ನಿನ್ನ ತಾತ, ಮುತ್ತಾತ ಮೊದಲಾಗಿ ಇಪ್ಪತ್ತೊಂದು ತಲೆಯಿಂದಲೂ ನನ್ನ
ದಾಸರು.

ಭಿಕ್ಷು—(ಕೋಪದಿಂದ) ಮಲಪಂಕಧಾರಿಯಾದ ನಿನಗೆ ನಾನು ದಾಸನೋ ?

ಕ್ಷಪಣಕ—ಎಲೋ ದುಷ್ಟ ಸನ್ಯಾಸಿಯೇ, ನಾನು ನಿನಗೆ ದೃಷ್ಟಾಂತವನ್ನು ಹೇ
ದೆನು. ಪ್ರಿಯವಾದ ವಿಷಯವನ್ನು ಹೇಳುತ್ತೇನೆ ಕೇಳು. ಬುದ್ಧಮ
ತವನ್ನು ಬಿಟ್ಟು, ಜಿನಶಾಸನವನ್ನು ಕೈಗೊಂಡು, ದಿಗಂಬರ ವ್ರತವನ್ನು
ಧರಿಸು.

ಭಿಕ್ಷು—ಛೀ ಪಾಪಿಯೇ, ನೀನು ಕೆಟ್ಟದ್ದಲ್ಲದೆ ಇತರರನ್ನೂ ಕೆಡಿಸುವೆಯಾ
ಧರ್ಮವಾದ ಸಿದ್ಧಾಂತವನ್ನು ಬಿಟ್ಟು, ನಿನ್ನಂತೆ ಶಾಸ್ತ್ರವಿರುದ್ಧವಾದ ಮ
ವನ್ನು ಯಾರು ತಾನೇ ಅಪೇಕ್ಷಿಸುವರು ? ಜಿನಧರ್ಮಜ್ಞಾನವನ್ನು ಯಾ
ರು ತಾನೇ ನಂಬುವರು ?

ಕ್ಷಪಣಕ—ಗ್ರಹಗಳೂ, ನಕ್ಷತ್ರಗಳೂ, ಚಂದ್ರಸೂರ್ಯ ಗ್ರಹಣಗಳೂ ಇವುಗ
ಪರಮಾರ್ಥ ಜ್ಞಾನವು ಇದರಲ್ಲಿ ಕಂಡುಬರುವುದರಿಂದ ಭಗವಂತನಾದ ಜಿ
ನಿಗೆ ಸರ್ವಜ್ಞತ್ವವು ಪ್ರಸಿದ್ಧವಾಗಿಯೇ ಇದೆ.

ಭಿಕ್ಷು—(ನಕ್ಕು) ಅನಾದಿಯಾಗಿ ಸಿದ್ಧವಾಗಿರುವ ಜ್ಯೋತಿಶ್ಶಾಸ್ತ್ರದಿಂದ ಅಪ್ರ
ಕ್ಷವಾದ ಜ್ಞಾನದಿಂದ ಮೋಸಹೋಗಿ, ನೀನು ಈ ವಿಧವಾದ, ಅತಿ ದುಃ
ಕರವಾದ ವ್ರತವನ್ನು ಆಶ್ರಯಿಸಿದ್ದೀಯೇ ? ನಿನ್ನ ಮತದಲ್ಲಿ ಆತ್ಮ

ಶರೀರ ಪ್ರಮಾಣವುಳ್ಳವನು. ಸಂಬಂಧವಿಲ್ಲದ ಮೂರು ಲೋಕಗಳ ಜ್ಞಾನವನ್ನು ಆತ್ಮನು ಹೊಂದುವುದು ಹೇಗೆ ? ಒಂದು ಗಡಿಗೆಯಲ್ಲಿ ಇಟ್ಟಿರುವ ದೀಪವು ಮನೆಯೊಳಗಿರುವ ಪದಾರ್ಥಗಳನ್ನೆಲ್ಲವನ್ನೂ ತೋರಿಸಬಲ್ಲದೇ ? ಆದ್ದರಿಂದ ಲೋಕದ್ವಯ ವಿರುದ್ಧವಾದ ಆರ್ಹತ ಮತಕ್ಕಿಂತಲೂ ಬುದ್ಧಮತವೇ ಅತಿ ಯುಕ್ತಿಯುಕ್ತವಾಗಿಯೂ, ಸಾಕ್ಷಾತ್ ಸುಖಪ್ರದವಾಗಿಯೂ ಇರುವುದೆಂದು ತೋರುತ್ತದೆ.

ಶಾಂತಿ—ಸಖಿಯೇ, ಬೇರೆ ಕಡೆ ಹೋಗೋಣ.

ಕರುಣೆ—ಹಾಗೆಯೇ ಆಗಲಿ.

ಶಾಂತಿ—(ಮುಂದೆ ನೋಡಿ) ಇಗೋ ಮುಂದೆ ಕಾಪಾಲಿಕನು ಬರುತ್ತಲಿರುವನು. ಇಲ್ಲಿಯಾದರೂ ಶ್ರದ್ಧೆಯನ್ನು ಹುಡುಕೋಣ.

(ಕಾಪಾಲಿಕನು ಪ್ರವೇಶಿಸುವನು.)

ಕಾಪಾಲಿಕ—ಮನುಷ್ಯರ ಮೂಳೆಗಳಿಂದ ಮಾಡಿದ ಒಡವೆಗಳನ್ನು ಧರಿಸಿದವನಾಗಿಯೂ, ಸ್ಮಶಾನವಾಸಿಯಾಗಿಯೂ, ನರಕಪಾಲದಲ್ಲಿ ಭೋಜನ ಮಾಡುವಂಥಾವನಾಗಿಯೂ, ಯೋಗಾಂಜನದಿಂದ ಸಂಶಯ ವಿಪರ್ಯಾಸಾದಿ ದೋಷಗಳಿಲ್ಲದೆ ಶುದ್ಧವಾದ ವಿಜ್ಞಾನವುಳ್ಳವನಾಗಿರುವ ನಾನು ಈ ಜಗತ್ತನ್ನು ಪರಸ್ಪರ ಭೇದವುಳ್ಳದ್ದನ್ನಾಗಿಯೂ, ಈಶ್ವರನಿಂದ ಅಭಿನ್ನವಾದದ್ದನ್ನಾಗಿಯೂ ತಿಳಿಯುತ್ತೇನೆ.

ಕ್ಷಪಣಕ—ಇವನು ಕಾಪಾಲಿಕ ವ್ರತವನ್ನು ಧರಿಸಿರುವನು. ಆದ್ದರಿಂದ ಇವನನ್ನೂ ಪ್ರಶ್ನೆಮಾಡುತ್ತೇನೆ. (ಸಮೀಪಕ್ಕೆ ಬಂದು) ನರಕಪಾಲವನ್ನು ಧರಿಸಿರುವ ಎಲೈ ಕಾಪಾಲಿಕನೇ, ನಿನ್ನ ಧರ್ಮವೆಂಥಾದ್ದು ? ಮೋಕ್ಷವೆಂಥಾದ್ದು ?

ಕಾಪಾಲಿಕ—ಎಲೈ ಕ್ಷಪಣಕನೇ, ನಮ್ಮ ಧರ್ಮವನ್ನು ಕೇಳು. ಕಪಾಲದೊಳಗಿರುವ ರಸದಿಂದಲೂ, ಹೃದಯದಲ್ಲಿರುವ ವಸೆಯಿಂದಲೂ ಕೂಡಿದ ಮನುಷ್ಯಮಾಂಸಗಳನ್ನು ಅಗ್ನಿಯಲ್ಲಿ ಹೋಮಮಾಡುವುದು, ಆಗ ತಾನೆ ಕತ್ತರಿಸಿದ ಕತ್ತಿನಿಂದ ಹೊರಗೆ ಹೊರಡುವ ಬಿಸಿಬಿಸಿಯಾದ ರಕ್ತದ ಧಾರೆಗಳಿಂದ ಸೊಗಯಿಸುವ ನರಬಲಿಗಳಿಂದ ಮಹಾಭೈರವನನ್ನು ಪೂಜಿಸುವುದು, ಕೊನೆ

ಯಲ್ಲಿ ಬ್ರಹ್ಮಕಪಾಲದಲ್ಲಿ ಇರುವ ಮದ್ಯವನ್ನ ಪಾನಮಾಡುವುದು ಇದು ನಮ್ಮ ಧರ್ಮವು.

ಭಿಕ್ಷು—(ಕಿವಿಯನ್ನು ಮುಚ್ಚಿಕೊಂಡು) ಇವನ ಧರ್ಮಚರ್ಯೆಯು ಬಹು ಘೋರವಾದದ್ದು.

ಕ್ಷಪಣಕ—ಅರ್ಹ, ಅರ್ಹ, ಘೋರ ಪಾಪಿಷ್ಠನಾದ ಯಾವನಿಂದಲೋ ಇವನು ಮೋಸಹೋಗಿದ್ದಾನೆ.

ಕಾಪಾಲಿಕ—(ಕೋಪದಿಂದ) ಪಾಪಿಯೇ, ಪಾಷಂಡಿಯೇ, ಚತುರ್ದಶ ಭುವನೋತ್ಪತ್ತಿ, ಸ್ಥಿತಿ, ಪ್ರಳಯಪ್ರವರ್ತಕನಾಗಿಯೂ, ವೇದಾಂತ ಸಿದ್ಧಾಂತ ಪ್ರಸಿದ್ಧ ಮಹಿಮನಾಗಿಯೂ ಇರುವ ಭವಾನೀವಲ್ಲಭನು ಮೋಸಗಾರನಲ್ಲವೇ? ಈ ಧರ್ಮದ ಮಹಿಮೆಯನ್ನು ತೋರಿಸುತ್ತೇನೆ ನೋಡು. ಹರಿಹರ ಬ್ರಹ್ಮಾದಿ ದೇವತೆಗಳನ್ನು ಇಲ್ಲಿಗೆ ಕರೆತರುತ್ತೇನೆ. ಆಕಾಶದಲ್ಲಿ ಸಂಚರಿಸುವ ನಕ್ಷತ್ರಗಳ ಗತಿಗಳನ್ನು ತಡೆದು ನಿಲ್ಲಿಸುತ್ತೇನೆ. ಪರ್ವತಗಳಿಂದಲೂ, ಪಟ್ಟಣಗಳಿಂದಲೂ ಕೂಡಿರುವ ಈ ಭೂಮಿಯನ್ನೆಲ್ಲವನ್ನೂ ನೀರಿನಿಂದ ತುಂಬಿಬಿಡುತ್ತೇನೆ. ಆ ನೀರನ್ನು ಕಲಶದ ಚೂರುಗಳಿಂದ ಒಂದು ಕ್ಷಣದಲ್ಲಿ ಕುಡಿದುಬಿಡುತ್ತೇನೆ.

ಕ್ಷಪಣಕ—ಎಲೈ ಕಾಪಾಲಿಕನೇ, ಆದ್ದರಿಂದಲೇ ಇಂದ್ರಜಾಲದ ಮಾಯೆಯನ್ನು ತೋರಿಸಿ, ನಿನ್ನನ್ನು ಯಾರೋ ಮೋಸಮಾಡಿರುವರೆಂದು ಹೇಳಿದ್ದು.

ಕಾಪಾಲಿಕ—ಎಲೈ ಪಾಪಿಯೇ, ತಿರಿಗಿಯೂ ಪರಮೇಶ್ವರನನ್ನು ಐಂದ್ರಜಾಲಿಕನೆಂದು ಆಕ್ಷೇಪಿಸುತ್ತೀಯಾ ? ಇನ್ನು ನಿನ್ನ ದುರ್ನಡತೆಯನ್ನು ಸಹಿಸುವುದಕ್ಕೆ ಆಗುವುದಿಲ್ಲ. (ಕತ್ತಿಯನ್ನು ಹಿರಿದು) ಈ ಕತ್ತಿಯಿಂದ ಕತ್ತರಿಸಲ್ಪಟ್ಟ ಕಂಠನಾಳದಿಂದ ಹೊರಡುವ ನೊರೆಗಳ ಸಮೂಹದಿಂದ ಕೂಡಿದ ರಕ್ತಗಳಿಂದ ಡಮರು, ಘಂಕಾರಗಳಿಂದ ಬಂದು ಸೇರಿದ ಭೂತವರ್ಗದೊಡನೆ ಈಶ್ವರನ ಪತ್ನಿಯಾದ ಭೈರವಿಯನ್ನು ಸಂತೋಷ ಪಡಿಸುತ್ತೇನೆ. (ಎಂದು ಕತ್ತಿಯನ್ನು ಬೀಸುವುದಕ್ಕಾರಂಭಿಸುವನು.)

ಕ್ಷಪಣಕ—(ಭಯದೊಂದಿಗೆ) ಎಲೌ ಭಾಗ್ಯಶಾಲಿಯೇ, "ಅಹಿಂಸಾ ಪರಮೋ ಧರ್ಮಃ" ಎಂದು ಭಿಕ್ಷುವಿನ ಸಮೀಪಕ್ಕೆ ಹೋಗುವನು.

ಭಿಕ್ಷು—(ಕಾಪಾಲಿಕನನ್ನು ತಡೆದು) ಅಯ್ಯಾ ಭಾಗ್ಯಶಾಲಿಯೇ, ವಿನೋದವಾಗಿ ಮಾಡಿದ ವಾಕ್ಕಲಹದಿಂದ ಕೋಪಗೊಂಡು, ಇವನನ್ನು ಹೊಡೆಯುವುದು ಯೋಗ್ಯವಲ್ಲ.

(ಕಾಪಾಲಿಕನು ಕತ್ತಿಯನ್ನು ಒರೆಯಲ್ಲಿ ಇಡುವನು.)

ಕ್ಷಪಣಕ—(ಸಮಾಧಾನವನ್ನು ತಂದುಕೊಂಡು) ನಿನ್ನ ಕೋಪಾವೇಶವು ಹೋಗಿ ಶಾಂತವಾಗಿದ್ದರೆ ಸ್ವಲ್ಪ ಪ್ರಶ್ನೆಮಾಡುವೆನು.

ಕಾಪಾಲಿಕ—ಕೇಳು ಕೇಳು.

ಕ್ಷಪಣಕ—ನಿನ್ನ ಧರ್ಮವನ್ನು ಕೇಳಿದ್ದಾಯಿತು. ಮೋಕ್ಷವೆಂಥಾದ್ದು ಹೇಳು.

ಕಾಪಾಲಿಕ—ಕೇಳು. ಸ್ರಕ್ಚಂದನಾದಿಗಳಿಲ್ಲದೆ ಸುಖವು ಎಲ್ಲಿಯೂ ಕಂಡಿದ್ದಿಲ್ಲ. ಸುಖಾನುಭವದಿಂದ ಬಿಡಲ್ಪಟ್ಟ ಜೀವನ ಸ್ಥಿತಿಯೇ ಮೋಕ್ಷವೆಂಬ ಪಾಷಾಣ ಪದವಿಯನ್ನ ಯಾರು ತಾನೇ ಪ್ರಾರ್ಥಿಸುವರು ? ನಮ್ಮ ಮತದಲ್ಲಿ ಮುಕ್ತನಾದವನು ಈಶ್ವರನಂತೆ ಶರೀರವುಳ್ಳವನಾಗಿ, ಪಾರ್ವತಿಗೆ ಸಮಾನಳಾದ ಕಾಂತೆಯೊಂದಿಗೆ ಸಂತೋಷವಾಗಿ ವಿಹರಿಸುತ್ತಾನೆಂದು ಪರಮೇಶ್ವರನು ಹೇಳಿರುವನು.

ಶಾಂತಿ—ಅನ್ಯಾಯ ಅನ್ಯಾಯ ! ಈ ಮತವನ್ನು ಪರಮೇಶ್ವರನು ಹೇಳಿರುವನೇ? ಅಯ್ಯೋ ! ದುರಾತ್ಮರುಗಳ ಮಾತಿಗೆ ಕೊನೆಯೇ ಇಲ್ಲ.

ಭಿಕ್ಷು—ಅಯ್ಯಾ ಭಾಗ್ಯಶಾಲಿಯೇ, ರಾಗಾದಿಗಳನ್ನು ಕಳೆಯದೇ ಇರುವವನಿಗೆ ಮೋಕ್ಷವುಂಟೆಂಬುವುದು ನಂಬತಕ್ಕದ್ದಲ್ಲ.

ಕ್ಷಪಣಕ—ಎಲೈ ಕಾಪಾಲಿಕನೇ, ಕೋಪಗೊಳ್ಳದಿದ್ದರೆ ಹೇಳುತ್ತೇನೆ. ಶರೀರವುಳ್ಳವನು, ರಾಗವುಳ್ಳವನು ಮುಕ್ತನು ಎಂಬಂಶವು ವೇದವಿರುದ್ಧವಾದದ್ದು.

ಕಾಪಾಲಿಕ—(ತನ್ನಲ್ಲಿ ತಾನು) ಇವರಿಬ್ಬರ ಮನಸ್ಸಿನಲ್ಲಿಯೂ ಅಶ್ರದ್ಧೆಯು ವ್ಯಾಪಿಸಿಕೊಂಡಿರುವುದು. (ತೆರೆಯ ಕಡೆ ತಿರುಗಿ) ಶ್ರದ್ಧೆಯೇ ಇಲ್ಲಿ ಬಾ.

(ಕಾಪಾಲಿನಿಯ ರೂಪವನ್ನು ಧರಿಸಿರುವ ಶ್ರದ್ಧೆಯು ಪ್ರವೇಶಿಸುವಳು.)

ಕರುಣೆ—ಸಖಿಯೇ, ರಾಜಸಿ ಶ್ರದ್ಧೆಯನ್ನು ನೋಡು. ಅರಳಿದ ನೈದಿಲೆಯಂತೆ ಕಣ್ಣುಳ್ಳವಳಾಗಿದಾಳೆ. ಇವಳ ನಡವೆಗಳೆಲ್ಲವೂ ಮನುಷ್ಯರ ಮೂಳೆಗ

ಳಿಂದ ಮಾಡಲ್ಪಟ್ಟಿವೆ. ಅವಯುವಗಳ ಸೌಷ್ಠವಗಳಿಂದ ಪ್ರಕಾಶಿಸುತ್ತಾ ವಿಲಾಸದಿಂದ ಬರುತ್ತಿರುವಳು.

ಶ್ರದ್ಧೆ—(ಪ್ರವೇಶಿಸಿ) ಸ್ವಾಮಿಯೇ, ಏನಪ್ಪಣೆ ?

ಕಾಪಾಲಿಕ—ಪ್ರಿಯಳೇ, ಈ ದುರಭಿಮಾನಿಯಾದ ಭಿಕ್ಷುವನ್ನು ಮೊದಲು ಆಶ್ರಯಿಸು.

(ಶ್ರದ್ಧೆಯು ಭಿಕ್ಷುವನ್ನು ಸತ್ಕರಿಸುವಳು.)

ಭಿಕ್ಷು—(ಸಂತೋಷದಿಂದ) ಆಹಾ ! ಕಾಪಾಲಿನಿಯ ಸತ್ಕಾರವು ಸಂತೋಷವನ್ನುಂಟುಮಾಡಿರುವುದು. ಬಹು ಜನ ಸ್ತ್ರೀಯರಿಂದ ಸತ್ಕರಿಸಲ್ಪಟ್ಟಿರುವೆನು. ಆದರೆ, ಈ ಕಾಪಾಲಿನಿಯ ಸತ್ಕಾರ ಸುಖವು ಬುದ್ಧನ ಆಣೆಗೂ ಎಲ್ಲಿಯೂ ಇಲ್ಲ. ಕಾಪಾಲಿಕರ ಮತವೇ ಶ್ರೇಷ್ಠವಾದದ್ದು. ಕಾಪಾಲಿಕರ ನಡತೆಯೇ ಪವಿತ್ರವಾದದ್ದು. ಈ ಧರ್ಮವು ಆಶ್ಚರ್ಯದಿಂದ ಕೂಡಿರುವುದು. (ಕಾಪಾಲಿಕನನ್ನು ನೋಡಿ) ಅಯ್ಯಾ ಭಾಗ್ಯಶಾಲಿಯೇ, ನಾನು ಬುದ್ಧಾನುಶಾಸನವನ್ನು ಬಿಟ್ಟೆನು. ಪಾರಮೇಶ್ವರ ಸಿದ್ಧಾಂತವನ್ನು ಪ್ರವೇಶಿಸಿರುವೆನು. ಆದ್ದರಿಂದ ನೀನು ಆಚಾರ್ಯನು. ನಾನು ಶಿಷ್ಯನು. ನನಗೆ ದೀಕ್ಷೆಯನ್ನು ಕೊಡು.

ಕ್ಷಪಣಕ—ಎಲೈ ಭಿಕ್ಷುವೇ, ನೀನು ಕಾಪಾಲಿನಿಯ ಸಹವಾಸದಿಂದ ದೂಷಿತನಾಗಿರುವೆ, ದೂರ ಹೋಗು.

ಭಿಕ್ಷು—ಎಲೈ ಪಾಪಿಯೇ, ಕಾಪಾಲಿನಿಯ ಸಹವಾಸದಿಂದ ಮೋಸಹೋದೆನು.

ಕಾಪಾಲಿಕ—ಪ್ರಿಯಳೇ, ಕ್ಷಪಣಕನನ್ನು ಹಿಡಿದುಕೋ.

(ಕಾಪಾಲಿನಿಯು ಕ್ಷಪಣಕನನ್ನು ಕೈ ಹಿಡಿದು ನಿಲ್ಲಿಸಿಕೊಳ್ಳುವಳು.)

ಕ್ಷಪಣಕ—ಅರ್ಹನ್, ಅರ್ಹನ್,) ಕಾಪಾಲಿನಿಯ ಸಂದರುಶನವು ಬಹು ಸುಖಕರವಾಗಿರುವುದು. ಇದರ ಮುಂದೆ ಶ್ರಾವಕಿಯ ಸುಖವು ಸುಖವಲ್ಲ. ಕಾಪಾಲಿಕ ದರುಶನವೇ ಸುಖಕರವಾದದ್ದು ಮತ್ತು ಮೋಕ್ಷಪ್ರದವಾದದ್ದು. ಆಚಾರ್ಯನೇ, ಈಗ ನಾನು ನಿನ್ನ ಕಿಂಕರನಾದೆನು. ನನ್ನನ್ನೂ ಮಹಾ ಭೈರವಾನುಶಾಸನದಲ್ಲಿ ದೀಕ್ಷಿತನನ್ನಾಗಿ ಮಾಡು.

ಕಾಪಾಲಿಕ—ಇಬ್ಬರೂ ಕುಳಿತುಕೊಳ್ಳಿರಿ.

(ಇಬ್ಬರೂ ಹಾಗೆಯೇ ಮಾಡುವರು.)

ಕಾಪಾಲಿಕ—ಪಾತ್ರವನ್ನು ತೆಗೆದುಕೊಂಡು ಕಣ್ಣು ಮುಚ್ಚಿ ಧ್ಯಾನಮಾಡುವನು.

ಶ್ರದ್ಧೆ—ಪಾತ್ರವು ಮದ್ಯದಿಂದ ಪೂರಿತವಾಯಿತು.

ಕಾಪಾಲಿಕ—(ನೋಡಿ ತಾನು ಸ್ವಲ್ಪ ಕುಡಿದು ಶೇಷವನ್ನು ಭಿಕ್ಷು, ಕ್ಷಪಣಕರಿಬ್ಬರಿಗೂ ಕೊಡುವನು) ಇದು ಪರಿಶುದ್ಧವಾದದ್ದು. ಸಂಸಾರ ರೋಗಕ್ಕೆ ಔಷಧವಾದದ್ದು. ಪಶುಪಾಶವನ್ನು ಛೇದಿಸುವುದಕ್ಕೆ ಕಾರಣವೆಂದು ಭೈರವನಿಂದ ಹೇಳಲ್ಪಟ್ಟಿರುವುದು. ಈ ಅಮೃತವನ್ನು ಕುಡಿಯಿರಿ.

(ಇಬ್ಬರೂ ಯೋಚನೆ ಮಾಡುವರು.)

ಕ್ಷಪಣಕ—ನಮ್ಮ ಜಿನಮತದಲ್ಲಿ ಸುರಾಪಾನವು ಹೇಳಿ ಇಲ್ಲ.

ಭಿಕ್ಷು—ಕಾಪಾಲಿಕನ ಎಂಜಲನ್ನು ಹೇಗೆ ಕುಡಿಯಲಿ ?

ಕಾಪಾಲಿಕ—(ಯೋಚನೆ ಮಾಡಿ) ಶ್ರದ್ಧೆಯೇ ಇವರುಗಳಿಗೆ ಇನ್ನೂ ಪಶುತ್ವವು ಹೋಗಿಲ್ಲ. ನನ್ನ ಬಾಯಿಯ ಸಂಬಂಧದಿಂದ ಈ ಮದ್ಯವನ್ನು ಇವರುಗಳು ಅಪವಿತ್ರವೆಂದು ತಿಳಿದಿದ್ದಾರೆ. ನೀನು ಕುಡಿದು ಇದನ್ನು ಪವಿತ್ರವಾಗಿ ಮಾಡು. "ಸ್ತ್ರೀಮುಖಂತು ಸದಾಶುಚಿ" ಎಂದು ದೊಡ್ಡವರು ಹೇಳುವರು.

ಶ್ರದ್ಧೆ—(ಅಪ್ಪಣೆಯೆಂದು ಪಾನಪಾತ್ರವನ್ನು ತೆಗೆದುಕೊಂಡು, ತಾನು ಸ್ವಲ್ಪ ಕುಡಿದು, ಶೇಷವನ್ನು ಕೊಡುವಳು.)

ಭಿಕ್ಷು—(ಮಹಾ ಪ್ರಸಾದವೆಂದು ತೆಗೆದುಕೊಂಡು ಕುಡಿಯುವನು.) ಆಹಾ ! ಈ ಮದ್ಯವು ಎಷ್ಟು ಮನೋಹರವಾಗಿರುವುದು. ನಾನು ಎಷ್ಟಾವರ್ತಿ ಪಗಡೆ ಹೂವಿನಂತೆ ವಾಸನೆಯುಳ್ಳ ಮದ್ಯವನ್ನು ಕುಡಿದಿಲ್ಲ ! ಆದರೆ, ಕಾಪಾಲಿನಿಯ ಪಾನದಿಂದ ಪವಿತ್ರವಾದ ಈ ಮದ್ಯವು ದೊರಕದೆ ಇದ್ದದ್ದರಿಂದಲೇ ದೇವತೆಗಳು ಅಮೃತದಲ್ಲಿ ಆಶೆಪಡುತ್ತಾರೆಂದು ನಾನು ತಿಳಿಯುತ್ತೇನೆ.

ಕ್ಷಪಣಕ—ಎಲೈ ಭಿಕ್ಷುಕನೇ, ಎಲ್ಲವನ್ನೂ ನೀನೇ ಕುಡಿದುಬಿಡಬೇಡ. ಕಾಪಾಲಿನಿಯ ವದನೋಚ್ಛಿಷ್ಟವಾದ ಮದ್ಯವನ್ನು ನನಗೂ ಸ್ವಲ್ಪ ಉಳಿಸು.

ಭಿಕ್ಷು—(ಕ್ಷಪಣಕನಿಗೆ ಪಾತ್ರವನ್ನು ಕೊಡುವನು.)

ಕ್ಷಪಣಕ—(ಕುಡಿದು) ಏನು ಮಾಧುರ್ಯ, ಏನು ರುಚಿ, ಏನು ವಾಸನೆ, ಬಹು ಕಾಲದಿಂದಲೂ ಜಿನಮತದಲ್ಲಿ ಬಿದ್ದು ಮೋಸಹೋದೆನು. ಎಲೈ ಭಿಕ್ಷುಕನೇ, ನನ್ನ ತಲೆಯು ತಿರುಗುತ್ತದೆ, ಮಲಗಿಕೊಳ್ಳುವೆನು.

ಭಿಕ್ಷು—ಹಾಗೆಯೇ ಮಾಡೋಣ. (ಎಂದಿಬ್ಬರೂ ಮಲಗುವರು.)

ಕಾಪಾಲಿಕ—ಪ್ರಿಯಳೇ, ಬೆಲೆಯಿಲ್ಲದೆ ಇಬ್ಬರು ದಾಸರು ಸಿಕ್ಕಿದರು. ಆದ್ದರಿಂದ ನಾವು ನರ್ತನ ಮಾಡೋಣ. (ಎಂದು ಕಾಪಾಲಿಕನೂ, ಶ್ರದ್ಧೆಯೂ ನರ್ತನ ಮಾಡುವರು.

ಕ್ಷಪಣಕ—ಎಲೈ ಭಿಕ್ಷುಕನೇ, ಈ ಕಾಪಾಲಿಕನು ಅಥವಾ ಆಚಾರ್ಯನು ಕಾಪಾಲಿನಿಯೊಂದಿಗೆ ಅಂದವಾಗಿ ನರ್ತನ ಮಾಡುವನು. ಇವನೊಂದಿಗೆ ನಾವೂ ನರ್ತನ ಮಾಡೋಣ.

ಭಿಕ್ಷು—ಹಾಗೆಯೇ ಆಗಲಿ. (ಇವರೆಲ್ಲರೂ ನರ್ತನ ಮಾಡುವರು.)

ಭಿಕ್ಷು—ಆಚಾರ್ಯನೇ, ಈ ನಿನ್ನ ಮತವು ಬಹಳ ಆಶ್ಚರ್ಯಕರವಾದದ್ದು. ಇದರಲ್ಲಿ ಕಷ್ಟವಿಲ್ಲದೆ ಇಷ್ಟಾರ್ಥವು ಸಿದ್ಧಿಸುತ್ತದೆ.

ಕಾಪಾಲಿಕ—ಇದು ಎಷ್ಟರ ಆಶ್ಚರ್ಯ ನೋಡು. ಈ ಮತದಲ್ಲಿ ನಮಗೆ ಅಪೇಕ್ಷಿತವಾದದ್ದನ್ನು ಬಿಡದೇನೇ ಅಷ್ಟಮಹಾ ಸಿದ್ಧಿಗಳು ಸಿದ್ಧಿಸುವುವಲ್ಲದೆ, ವಶ್ಯ, ಆಕರ್ಷ, ವಿಮೋಹನ, ಪ್ರಮಥನ, ಪ್ರಕ್ಷೋಭಣ, ಉಚ್ಚಾಟನ, ಇವುಗಳಾದ ಪ್ರಾಕೃತ ಸಿದ್ಧಿಗಳೂ ಕೂಡ ಸಿದ್ಧಿಸುತ್ತವೆ. ಆದರೆ ಇವು ಯೋಗಕ್ಕೆ ವಿಘ್ನಕಾರಿಗಳು.

ಕ್ಷಪಣಕ—ಕಾಪಾಲಿಕ, ಆಚಾರ್ಯ ರಾಜಕುಲ (ಎಂದು ತಿರುಗುವನು)

ಭಿಕ್ಷು—ಇವನು ಅಭ್ಯಾಸವಿಲ್ಲದೆ ಹೆಚ್ಚಾಗಿ ಕುಡಿದದ್ದರಿಂದ ಮತ್ತನಾಗಿರುವನು. ಕಾಪಾಲಿಕನೇ ಇವನ ಮದವನ್ನ ಇಳಿಸು.

ಕಾಪಾಲಿಕ—ಹಾಗೆಯೆ ಆಗಲಿ ಎಂದು ತನ್ನ ಮುಖೋಚ್ಛಿಷ್ಟವಾದ ತಾಂಬೂಲವನ್ನು ಕ್ಷಪಣಕನಿಗೆ ಕೊಡುವನು.

(ಕ್ಷಪಣಕನು ಸ್ವಸ್ಥಚಿತ್ತನಾಗಿ)

ಕ್ಷಪಣಕ—ಆಚಾರ್ಯನೇ, ಮದ್ಯವನ್ನ ತರಿಸುವಂತೆ ಸ್ತ್ರೀಪುರುಷರನ್ನು ತರಿಸುವ ಶಕ್ತಿಯೂ ಇದೆಯೇ ?

ಕಾಪಾಲಿಕ—ಏನು ವಿಶೇಷವಾಗಿ ಕೇಳುತ್ತೀಯೆ ? ವಿದ್ಯಾಧರ ಸ್ತ್ರೀಯರನ್ನಾಗಲೀ, ಸುರಸುಂದರಿಯರನ್ನಾಗಲಿ, ನಾಗಕನ್ನಿಕೆಯರನ್ನಾಗಲೀ, ಯಕ್ಷಕನ್ಯೆಯರನ್ನಾಗಲೀ, ಈ ಮೂರು ಲೋಕಗಳಲ್ಲಿ ನನಗೆ ಇಷ್ಟವಾದದ್ದನ್ನೆಲ್ಲವನ್ನೂ ವಿದ್ಯಾಬಲದಿಂದ ತರಿಸುವೆನು.

ಕ್ಷಪಣಕ—ಎಲೈ ನನ್ನ ಗಣಿತದಿಂದ ನಾವೆಲ್ಲರೂ ಮಹಾಮೋಹನ ಕಿಂಕರರೆಂದು ತಿಳಿದುಬಂದಿದೆ.

ಭಿಕ್ಷು ಕಾಪಾಲಿಕರು—ನೀನು ಹೇಳಿದ್ದು ನಿಜ.

ಕ್ಷಪಣಕ—ಆದರೆ ಯಾವುದಾದರೂ ರಾಜಕೆಲಸವನ್ನು ಆಲೋಚಿಸೋಣ.

ಕಾಪಾಲಿಕ—ಯಾವ ರಾಜಕಾರ್ಯ ?

ಕ್ಷಪಣಕ—ಸತ್ವಪುತ್ರಿಯಾದ ಶ್ರದ್ಧೆಯು ಮಹಾರಾಜನ ಅಪ್ಪಣೆಯಿಂದ ಅಪಹರಿಸಲ್ಪಡಬೇಕೆಂಬುದೇ ರಾಜಕಾರ್ಯ.

ಕಾಪಾಲಿಕ—ಆ ದಾಸೀಪುತ್ರಿಯು ಎಲ್ಲಿರುವಳು ? ಹೇಳು. ನನ್ನ ವಿದ್ಯೆಯ ಬಲದಿಂದ ಐದು ನಿಮಿಷದಲ್ಲಿ ಕರೆತರುವೆನು.

ಕ್ಷಪಣಕ—ಆದರೆ ನಾನು ಗುಣಿಸಿ, ನಿನಗೆ ತೋರಿಸುತ್ತೇನೆ (ಎಂದು ಕಡ್ಡಿಯನ್ನು ತೆಗೆದುಕೊಂಡು ಭೂಮಿಯಲ್ಲಿ ಮನೆಗಳನ್ನು ಬರೆದು ಎಣಿಸುವನು)

ಶಾಂತಿ—ಸಖಿಯೇ, ಈ ದುಷ್ಟರ ಮಾತು ನನ್ನ ತಾಯಿಯ ವಿಷಯದಲ್ಲಿ ನಡೆಯುವಂತೆ ಕಾಣುತ್ತದೆ. ಚನ್ನಾಗಿ ಕೇಳೋಣ.

ಕರುಣೆ—ಸಖಿಯೇ, ಹಾಗೆಯೇ ಆಗಲಿ.

ಕ್ಷಪಣಕ—ಜಲದಲ್ಲಿ ಇಲ್ಲ, ನೆಲದಲ್ಲಿ ಇಲ್ಲ, ಪರ್ವತದಲ್ಲಿಯೂ ಇಲ್ಲ, ಪಾತಾಳದಲ್ಲಿಯೂ ಇಲ್ಲ. ಆ ಶ್ರದ್ಧೆಯು ಮಹಾತ್ಮರ ಹೃದಯದಲ್ಲಿ ಇದ್ದಾಳೆ. ಅವಳಿಗೆ ವಿಷ್ಣುಭಕ್ತಿಯು ಸಹಾಯಕಳಾಗಿ ಜೊತೆಯಲ್ಲಿಯೇ ಇದ್ದಾಳೆ.

ಕರುಣೆ—(ಸಂತೋಷದಿಂದ) ಸಖೀ ಕೇಳಿದೆಯಾ ? ನಿನ್ನ ಅದೃಷ್ಟ ಒಳ್ಳೆಯದು. ದೇವಿಯಾದ ಶ್ರದ್ಧೆಯು ವಿಷ್ಣುಭಕ್ತಿಯ ಪಾರ್ಶ್ವದಲ್ಲಿದ್ದಾಳೆ.

ಶಾಂತಿ—(ಸಂತೋಷವನ್ನಭಿನಯಿಸುವಳು)

ಭಿಕ್ಷು—ಧರ್ಮನು ಕಾಮನನ್ನು ಬಿಟ್ಟು ಹೊರಟು ಹೋದನಷ್ಟೆ. ಅವನು ರುವನು ?

ಕ್ಷಪಣಕ—(ಪುನಃ ಎಣಿಸಿ) ಅವನೂ ಅಲ್ಲಿಯೇ ಇರುವನು.

ಕಾಪಾಲಿಕ—(ದುಃಖದಿಂದ) ನಮ್ಮ ಮಹಾರಾಜನಿಗೆ ಮಹಾಕಷ್ಟವು ಪ್ರಾ ಪ್ತವಾಯಿತು. ಏಕೆಂದರೆ, ಪ್ರಬೋಧೋದಯಕ್ಕೆ ವಿಷ್ಣುಭಕ್ತಿಯೇ ಮೂ ಆ ವಿಷ್ಣುಭಕ್ತಿಯನ್ನು ಸತ್ವಪುತ್ರಿಯಾದ ಶ್ರದ್ಧೆಯು ಅನುಸರಿಸಿರುವ ಕಾಮನನ್ನು ಬಿಟ್ಟು, ಧರ್ಮನೂ ಅಲ್ಲಿಯೇ ಸೇರಿರುವುದಾದರೆ, ವಿವೇ ಕೆಲಸವು ಕೈಗೂಡಿತೆಂದು ತೋರುತ್ತದೆ. ಆದರೂ ಲಕ್ಷ್ಯವಿಡದೆ, ಮ ರಾಜನ ಪ್ರಯೋಜನವನ್ನ ನಡೆಸಬೇಕು. ಆದ್ದರಿಂದ ಧರ್ಮನನ್ನೂ, ಶ್ರ ಯನ್ನೂ ಕರೆತರುವುದಕ್ಕಾಗಿ ಮಹಾ ಭೈರವೀ ವಿದ್ಯೆಯನ್ನು ಕಳುಹಿಸೋ (ಎಂದು ಹೊರಟು ಹೋಗುವರು)

ಶಾಂತಿ—ಸಖಿಯೇ, ನಾವೂ ಕೂಡ ಈ ದುಷ್ಟರ ಉದ್ಯೋಗವನ್ನು ವಿಷ್ಣುಭ ದೇವಿಗೆ ತಿಳಿಸೋಣ ನಡೆ (ಎಂದು ಹೊರಟು ಹೋಗುವರು)

---

## ಚತುರ್ಥಾಂಕ.

(ಮೈತ್ರಿಯ ಪ್ರವೇಶ)

ಮೈತ್ರಿ—ಮಹಾ ಭೈರವಿಯು ಭಯದಿಂದ ಪ್ರಿಯಸಖಿಯಾದ ಶ್ರದ್ಧೆಯನ್ನೂ ಧರ್ಮನನ್ನೂ, ವಿಷ್ಣುಭಕ್ತಿಯು ಕಾಪಾಡಿದಳೆಂದು ಮುದಿತೆಯಿಂದ ಕೇ ತಿಳಿದೆನು. ಆದ್ದರಿಂದ ಶ್ರದ್ಧೆಯನ್ನು ನೋಡಬೇಕೆಂದು ಹೃದಯ ಆತುರಪಡುತ್ತಿರುವುದು. ಪ್ರಿಯಸಖಿಯನ್ನು ಎಲ್ಲಿ ನೋಡುವೆನು ?

(ಶ್ರದ್ಧೆಯು ಪ್ರವೇಶಿಸುವಳು.)

ಶ್ರದ್ಧೆ—(ನಾಲ್ಕು ದಿಕ್ಕುಗಳನ್ನೂ ನೋಡಿ ಹೆದರಿಕೆಯಿಂದ ನಡುಗುತ್ತ) ಅಬ್ಬಾ ಭೈರವಿಯನ್ನು ನೋಡಿದ ನನ್ನ ಮನಸ್ಸು ಬಾಳೆಯ ಗಿಡದಂತೆ ಈಗಲೂ ಗುತ್ತಲಿದೆ.

ಮೈತ್ರಿ—(ತನ್ನಲ್ಲಿ ತಾನು) ಪ್ರಿಯಸಖಿ ಇತ್ತಲೇ ಬರುತ್ತಿರುವಳು. ಭಯದಿಂದಲೂ, ಸಂಭ್ರಮದಿಂದಲೂ ಭ್ರಮೆಗೊಂಡ ಮನಸ್ಸುಳ್ಳವಳಾಗಿ, ಗಾಳಿಯಿಂದ ಚಲಿಸುವ ಬಾಳೆಯ ಗಿಡದಂತೆ ನಡುಗುವ ಅವಯವಗಳಿಂದ ಏನೋ ಆಲೋಚಿಸುತ್ತಲಿರುವ ಪ್ರಿಯಸಖಿಯಾದ ಶ್ರದ್ಧೆಯು ಇಲ್ಲಿಯೇ ಇರುವಳು. ಇವಳು ಏನೋ ಯೋಚನೆಯಲ್ಲಿ ಮಗ್ನಳಾಗಿ, ಎದುರಿಗೆ ಬಂದ ನನ್ನನ್ನೂ ಕೂಡ ನೋಡುವುದೇ ಇಲ್ಲ. ನಾನೇ ಮಾತನಾಡಿಸುವೆನು. ಪ್ರಿಯಸಖಿಯೇ, ಘಾಬರಿಗೊಂಡ ಮನಸ್ಸಿನಿಂದ ನನ್ನನ್ನೂ ನೀನು ನೋಡುವುದೇ ಇಲ್ಲವೇ ?

ಶ್ರದ್ಧೆ—(ನೋಡಿ) ಪ್ರಿಯಸಖಿ ಮೈತ್ರಿ, ಕಾಳರಾತ್ರಿಯಂತೆ ಭಯಂಕರಳಾದ ಭೈರವಿಯ ಹಲ್ಲುಗಳ ಸಂದಿನಲ್ಲಿ ಸಿಕ್ಕಿಕೊಂಡುಬಿದ್ದಿದ್ದ ನಾನು ಪುನಃ ಇದೇ ಜನ್ಮದಲ್ಲಿ ನಿನ್ನನ್ನು ನೋಡಿದೆನಲ್ಲಾ, ಬಾ. ನಿನ್ನನ್ನು ನೋಡಿ ನನಗೆ ತುಂಬಾ ಸಂತೋಷವಾಯಿತು.

ಮೈತ್ರಿ—(ಹಾಗೆ ಮಾಡಿ) ಸಖೀ, ವಿಷ್ಣುಭಕ್ತಿಯಿಂದ ತಿರಸ್ಕೃತಳಾದ ಭೈರವಿಯ ಹೆದರಿಕೆಯಿಂದ ಈಗಲೂ ನಿನ್ನ ಅವಯವಗಳು ಏಕೆ ನಡಗುತ್ತವೆ ?

ಶ್ರದ್ಧೆ—ಮೈತ್ರಿಯೇ, ನರಕಪಾಲಗಳಿಂದ ಮಾಡಿದ ಕುಂಡಲಗಳಿಂದಲೂ, ಮಿಂಚಿನಂತೆ ಕಣ್ಣನ್ನು ಮುಚ್ಚಿಸುವ ನೋಟದಿಂದಲೂ, ಬೆಂಕಿಯ ಜ್ವಾಲೆಯಂತೆ ಕೆಂಪಾದ ಕೂದಲುಗಳಿಂದಲೂ, ಚಂದ್ರನ ಕಲೆಗಳಂತಿರುವ ಕೋರೇಹಲ್ಲುಗಳ ಮಧ್ಯದಲ್ಲಿ ನೀಡಿದ ನಾಲಿಗೆಯಿಂದಲೂ ಮಹಾ ಭಯಂಕರಳಾದ ಆ ಭೈರವಿಯನ್ನು ಸ್ಮರಿಸಿಕೊಂಡರೆ, ಯಾರಿಗೆ ತಾನೇ ಶರೀರವು ನಡಗುವುದಿಲ್ಲ ?

ಮೈತ್ರಿ—(ಹೆದರಿಕೆಯಿಂದ) ಆಹಾ ! ಹಾಳು ಭೈರವಿಯು ಬಹು ಭಯಂಕರಳು. ಅವಳು ಬಂದು ಏನು ಮಾಡಿದಳು ?

ಶ್ರದ್ಧೆ—ಕೇಳು, ಆ ಭೈರವಿಯು ಗಿಡುಗನು ಹಾರಿಬೀಳುವಂತೆ ಬಿದ್ದು, ಕಾಲುಗಳಲ್ಲಿ ನನ್ನನ್ನೂ, ಕೈಯ್ಯಲ್ಲಿ ಧರ್ಮನನ್ನೂ ಹಿಡಿದುಕೊಂಡು, ಉಗುರುಗಳಲ್ಲಿ ಮಾಂಸಪಿಂಡವನ್ನೂ ಹಿಡಿದು, ಹಾರುವ ಹದ್ದಿನಂತೆ ಮಹಾ ವೇಗದಿಂದ ಆಕಾಶಕ್ಕೆ ಹಾರಿಬಿಟ್ಟಳು.

ಮೈತ್ರಿ—ಆಹಾ ! ಕಷ್ಟ ಕಷ್ಟ (ಎಂದು ಮೂರ್ಛಿತಳಾಗುವಳು)

ಶ್ರದ್ಧೆ— ಸಖೀ ಸಂತೈಸಿಕೋ, ಸಂತೈಸಿಕೋ.

ಮೈತ್ರಿ—(ಸಮಾಧಾನವನ್ನು ಹೊಂದಿ) ಆಮೇಲೆ, ಆಮೇಲೆ.

ಶ್ರದ್ಧೆ—ಆಮೇಲೆ ನಮ್ಮ ಆರ್ತಧ್ವನಿಯನ್ನು ಕೇಳಿ, ದಯಾರ್ದ್ರಹೃದಯಳಾದ ವಿಷ್ಣುಭಕ್ತಿ ದೇವಿಯು ಮಹಾ ಕೋಪದಿಂದ ಹುಬ್ಬುಗಂಟಿಕ್ಕಿ, ಕೆಂಪಡರಿದ ಕಣ್ಣಿನಿಂದ ಒಂದು ಸಲ ನೋಡಿದಳು. ಅವಳ ದೃಷ್ಟಿಪಾತ ಮಾತ್ರದಿಂದಲೇ ವಜ್ರಾಹತವಾದ ಶೈಲದಂತೆ ಆ ಭೈರವಿಯು ತಲೆಯೊಡೆದು ಕೆಳಗೆ ಬಿದ್ದುಬಿಟ್ಟಳು.

ಮೈತ್ರಿ—ಹುಲಿಯ ಬಾಯಿಂದ ಜಿಂಕೆಯಂತೆ ನೀನು ಬದುಕಿದ್ದು ಅದೃಷ್ಟ ವಿಶೇಷ. ಆಮೇಲೆ.

ಶ್ರದ್ಧೆ—ಆಮೇಲೆ ವಿಷ್ಣುಭಕ್ತಿ ದೇವಿಯು ಅಭಿಮಾನದೊಡನೆ ಆ ದುರಾತ್ಮನಾದ ಮಹಾಮೋಹನು ನನ್ನನ್ನೂ ಲಕ್ಷ್ಯಮಾಡದೆ, ಹೀಗೆ ವರ್ತಿಸುತ್ತಲಿದಾನೆ. ಅವನನ್ನು ಸಮೂಲವಾಗಿ ನಾಶಮಾಡುವೆನು ಎಂದು ಹೇಳಿದಳು. ಮತ್ತು ನನ್ನನ್ನು ಕುರಿತು—" ಎಲೈ ಶ್ರದ್ಧೆಯೇ, ಕಾಮಕ್ರೋಧಾದಿಗಳನ್ನು ಜಯಿಸುವುದಕ್ಕೋಸ್ಕರ ಉದ್ಯುಕ್ತನಾಗುವಂತೆ ವಿವೇಕನಿಗೆ ಹೇಳು. ಅನಂತರದಲ್ಲಿ ವೈರಾಗ್ಯನು ಹುಟ್ಟುವನು. ನಾನು ಕಾಲೋಚಿತವಾಗಿ ಪ್ರಾಣಾಯಾಮಾದಿಗಳನ್ನು ಬದುಕಿಸಿ, ನಿನ್ನ ಸೈನ್ಯವನ್ನು ಅನುಗ್ರಹಿಸುವೆನು. ಋತಂಭರಾದಿ ದೇವಿಯರು ಶಾಂತ್ಯಾದಿಗಳ ಕೌಶಲದಿಂದ ಉಪನಿಷದ್ದೇವಿಯರನ್ನು ಹೊಂದಿದ ಭಗವಂತನಿಗೆ ಪ್ರಬೋಧೋದಯವನ್ನುಂಟುಮಾಡುವರು " ಎಂದು ಆಜ್ಞಾಪಿಸಿದಳು. ಆದ್ದರಿಂದ ನಾನು ಈಗ ವಿವೇಕನ ಸಮೀಪಕ್ಕೆ ಹೊರಟಿರುವೆನು. ನೀನು ಏನು ಮಾಡಿಕೊಂಡು ಕಾಲವನ್ನು ಕಳೆಯುವೆ ?

ಮೈತ್ರಿ—ಕರುಣೆ, ಮುದಿತೆ, ಉಪೇಕ್ಷೆಯರೆಂಬ ನನ್ನ ಮೂರು ಜನ ಸಹೋದರಿಯರೊಡನೆ ವಿಷ್ಣುಭಕ್ತಿಯ ಅಪ್ಪಣೆಯಿಂದ ವಿವೇಕನ ಕಾರ್ಯಸಿದ್ಧಿಗಾಗಿ ಮಹಾತ್ಮರುಗಳ ಹೃದಯದಲ್ಲಿ ವಾಸಮಾಡುತ್ತೇನೆ. ಆ ಮಹಾತ್ಮರುಗಳು ಸುಖವುಳ್ಳ ಜೀವನಲ್ಲಿ ನನ್ನನ್ನು ಧ್ಯಾನಿಸುತ್ತಾರೆ. ರಾಗದ್ವೇಷವುಳ್ಳ ಪ್ರಾಣಿಯಲ್ಲಿ ಕರುಣೆಯನ್ನು ಧ್ಯಾನಿಸುತ್ತಾರೆ. ಪುಣ್ಯಕೆಲ

ಮಾಡುವ ಪ್ರಾಣಿಗಳಲ್ಲಿ ಮುದಿತೆಯನ್ನೂ, ಕೆಟ್ಟಬುದ್ಧಿಯುಳ್ಳ ಪ್ರಾಣಿಗಳಲ್ಲಿ ಉಪೇಕ್ಷೆಯನ್ನೂ ಧ್ಯಾನಿಸುತ್ತಾರೆ. ಹೀಗಾದರೆ ರಾಗ, ಲೋಭ, ದ್ವೇಷಗಳಿಂದ ಕಲುಷನಾದಾಗ್ಯೂ, ಅಂತರಾತ್ಮನು ನಿರ್ಮಲನಾಗುವನು. ಹೀಗೆ ನಾವು ನಾಲ್ಕು ಜನ ಸಹೋದರಿಯರು ವಿವೇಕನ ಅಭ್ಯುದಯ ಕೆಲಸದಲ್ಲಿಯೇ ಕಾಲವನ್ನು ಕಳೆಯುತ್ತೇವೆ. ಈಗ ನೀನು ಮಹಾರಾಜನನ್ನು ಎಲ್ಲಿ ನೋಡುವಿ ?

ಶ್ರದ್ಧೆ—ರಾಢಾ ದೇಶದಲ್ಲಿ ಗಂಗಾ ನದಿಯ ಸಮೀಪದಲ್ಲಿರುವನು. ಚಕ್ರತೀರ್ಥದಲ್ಲಿ ಮೀಮಾಂಸಾಸಹಿತಳಾದ ಮತಿಯೊಂದಿಗೆ ಉಪನಿಷದ್ದೇವಿಯ ಸಂಗಮಕ್ಕೋಸ್ಕರ ರಾತ್ರಿ ಹಗಲೂ ತಪಸ್ಸು ಮಾಡುತ್ತಿದಾನೆಂದು ವಿಷ್ಣುಭಕ್ತಿ ದೇವಿಯು ಹೇಳಿರುವಳು.

ಮೈತ್ರಿ—ಪ್ರಿಯಸಖಿಯೇ, ಹಾಗಾದರೆ ನೀನು ಹೋಗು, ನನ್ನ ಕೆಲಸಕ್ಕೆ ನಾನು ಹೋಗುತ್ತೇನೆ.

ಶ್ರದ್ಧೆ—ಹಾಗೆಯೇ ಆಗಲಿ (ಎಂದಿಬ್ಬರೂ ಹೊರಟು ಹೋಗುವರು)

(ರಾಜನೂ, ಪ್ರತೀಹಾರಿಯೂ ಪ್ರವೇಶಿಸುವರು)

ರಾಜ—ಎಲೌ ಪಾಪಿಯೇ, ಮಹಾಮೋಹನೇ, ನಿನ್ನಿಂದ ಧರ್ಮಾತ್ಮರಾದ ಮಹಾಜನಗಳು ಸರ್ವಪ್ರಕಾರದಲ್ಲಿಯೂ ಹಾಳಾದರು. ಏಕೆಂದರೆ, ಈ ಜನಗಳು ದಿವ್ಯವಾದ ಅಪಾರ ಮಹಿಮೆಯುಳ್ಳ ಶಾಂತವಾದ ನಿರ್ಮಲಜ್ಞಾನಾನಂದ ಸ್ವರೂಪವಾದ, ವಿಕಾರಗಳಿಲ್ಲದ ಬ್ರಹ್ಮಸಮುದ್ರದಲ್ಲಿ ಮುಳಿಗಿದಾಗ್ಯೂ, ಸ್ವಲ್ಪವೂ ಅನುಭವಿಸುವುದಿಲ್ಲ. ನಿಸ್ಸಾರವಾದ ಮೃಗತೃಷ್ಣಿಕಾ ಸಮುದ್ರ ಜಲದಲ್ಲಿ ಪಾನಮಾಡುತ್ತಾರೆ, ಆಚಮನ ಮಾಡುತ್ತಾರೆ, ಸಂತೋಷಪಡುತ್ತಾರೆ, ಮುಳುಗುತ್ತಾರೆ, ಏಳುತ್ತಾರೆ ಅಥವಾ ಈ ಸಂಸಾರ ಚಕ್ರವನ್ನು ನಡೆಸುವ ಮಹಾಮೋಹನಿಗೆ ಅಜ್ಞಾನವೇ ಮೂಲವು. ಅದು ತತ್ವಬೋಧನದಿಂದಲೇ ನಾಶವಾಗಬೇಕು. ಏಕಂದರೆ, ಅಜ್ಞಾನ ಮೂಲಕವಾದ ಈ ಸಂಸಾರ ವೃಕ್ಷವನ್ನು ಬುಡಸಹಿತ ನಾಶಮಾಡಬೇಕಾದರೆ, ವಿಶ್ವೇಶ್ವರಾಧನದಿಂದ ಉಂಟಾದ ತತ್ವಸಾಕ್ಷಾತ್ಕಾರ ಹೊರತು, ಬೇರೇ ಉಪಾಯುವಿ

ಲ್ಲವು. "ಪ್ರಾಯಸ್ಸುಕೃತಿನಾಮರ್ಥೇ ದೇವಾಯಾಂತಿ ಸಹಾ ಯತಾಂ" ಪ್ರಾಯಕವಾಗಿ ಪುಣ್ಯಶಾಲಿಗಳು ಮಾಡುವ ಕೆಲಸಕ್ಕೆ ದೇವತೆಗಳೂ ಸಹಾಯಕರಾಗುವರೆಂದು ತತ್ವಜ್ಞರು ಹೇಳುವರು. ಹಾಗೆಯೇ ವಿಷ್ಣುಭಕ್ತಿ ದೇವಿಯು ಕಾಮಾದಿಗಳ ಜಯದಲ್ಲಿ ಉಜ್ಜುಗಿಸು. ನಾನೂ ಕೂಡ ನಿನ್ನ ಜೊತೆಯಲ್ಲಿ ಇರುವೆನೆಂದು ಹೇಳಿಕಳುಹಿಸಿರುವಳು. ಅದರಲ್ಲಿ ಕಾಮನೂ, ಪ್ರಥಮವೀರನು ಅವನನ್ನು ಜಯಿಸುವುದಕ್ಕೆ ವಸ್ತುವಿಚಾರನೇ ಶಕ್ತನು. ಆದ್ದರಿಂದ ಅವನನ್ನು ಕಳುಹಿಸುವೆನು. ವೇದವತೀ, ವಸ್ತುವಿಚಾರನನ್ನು ಕರೆದುಕೊಂಡು ಬಾ.

ಪ್ರತೀಹಾರಿ—ಅಪ್ಪಣೆ (ಎಂದು ಹೋಗಿ ವಸ್ತುವಿಚಾರನೊಂದಿಗೆ ಪ್ರವೇಶಿಸುವಳು)

ವಸ್ತುವಿಚಾರ—ಆಶ್ಚರ್ಯ! ವಿಚಾರಶೂನ್ಯವಾದ ಸೌಂದರ್ಯದ ಗರ್ವದಿಂದ ಉಬ್ಬಿದ ಹಾಳಾದ ಕಾಮನು ಪ್ರಪಂಚವನ್ನೇ ಹಾಳುಮಾಡುತ್ತಲಿರುವನು. ಅಥವಾ ದುರಾತ್ಮನಾದ ಮಹಾಮೋಹನೇ ಹಾಳುಮಾಡುತ್ತಿರುವನು. ಅದೇನಂದರೆ, ಎಂತಹ ವಿದ್ವಾಂಸನಾದಾಗ್ಯೂ, ಪ್ರತ್ಯಕ್ಷವಾದ ಕೊಳೆಯ ಚೀಲವಾದ ಸ್ತ್ರೀಯನ್ನು ನೋಡಿದ ಒಡನೆಯೇ ಕಾಂತೆ, ಉತ್ಪಲಲೋಚನೆ, ವಿಪುಲಶ್ರೋಣಿಯುಳ್ಳವಳು, ಕಮಲದಂತಿರುವ ಮುಖವುಳ್ಳವಳು, ತಿದ್ದಿದ ಹುಬ್ಬುಳ್ಳವಳು, ಎಂದು ನಾನಾವಿಧವಾಗಿ ಹೊಗಳುತ್ತಾನೆ, ಮತ್ತನಾಗುತ್ತಾನೆ, ಸಂತೋಷ ಪಡುತ್ತಾನೆ, ವಿನೋದ ಪಡುತ್ತಾನೆ. ಹೀಗೆ ಕೆಟ್ಟ ಪದಾರ್ಥದಲ್ಲಿ ಸೌಂದರ್ಯ ಬುದ್ಧಿಯು ಮಹಾಮೋಹನ ದುಶ್ಚೇಷ್ಟೆಯಲ್ಲದೆ ಮತ್ತೇನು? ವಸ್ತುತತ್ವವನ್ನು ವಿಚಾರ ಮಾಡಲು ಶಕ್ತರಾದ ತೀಕ್ಷ್ಣಬುದ್ಧಿಯುಳ್ಳವರಿಗೂ ಕೂಡ ಹೆಂಗಸರಲ್ಲಿ ವೈರಾಗ್ಯವಿಲ್ಲ. ಸ್ವಭಾವತಃ ವಿಚಾರ ಮಾಡಿದರೆ, ಕೆಸರಿನಂತಿರುವ ಮಾಂಸದ ಮುದ್ದೆ, ಅಸ್ಥಿಪಂಜರ, ಮಹಾ ದುರ್ಗಂಧ, ಅಸಹ್ಯ ವೇಷ, ಇವುಗಳ ಸಮುದಾಯವೇ ಹೆಂಗಸು. ಇಂತಹ ನಾರಿಯಲ್ಲಿ ಇತರ ಪದಾರ್ಥಗಳ ಗುಣಗಳನ್ನು ಆರೋಪಣ ಮಾಡುವುದು ಸ್ಪಷ್ಟವಾಗಿಯೇ ಇದೆ. ಮುತ್ತಿನ ಹಾರಗಳೂ, ರತ್ನಖಚಿತವಾದ ಪಾದಾಭರಣಗಳೂ, ಕುಂಕುಮಕೇಸರಿಯ ಅಂಗರಾಗವೂ, ವಾಸನೆಯುಳ್ಳ ಪುಷ್ಪಮಾಲಿಕೆಗಳೂ, ನಾನಾ ಬಣ್ಣದ ಪಟ್ಟೆಯ ಶೀರೆಗಳೂ, ಇವು

ಗಳಲ್ಲಿರುವ ಸೌಂದರ್ಯವನ್ನು ಸ್ತ್ರೀಯರಲ್ಲಿ ಆರೋಪಿಸಿ ಭ್ರಮೆಗೊಳ್ಳುವರು. ಇದು ತಿಳಿಯದವರ ಆರೋಪನೇ ಹೊರತು, ತಿಳಿದವರು ಎಂದಿಗೂ ಹೀಗೆ ಭ್ರಮಿಸುವುದಿಲ್ಲ. (ಹಾಗೆಯೇ ಯೋಚಿಸಿ) ಎಲೈ ಪಾಪಿಯೇ ಕಾಮನೇ, ಚಂಡಾಲನೇ, ನೀನು ನಿರಾಧಾರವಾಗಿ ಜನಗಳಲ್ಲಿ ವಿರ್ಭವಿಸಿ ಏಕೆ ತೊಂದರೆ ಪಡಿಸುವೆ? ನಿನ್ನಿಂದ ವ್ಯಾಕುಲನಾದ ಮನುಷ್ಯನು "ಈ ಹುಡುಗಿಯು ನನ್ನಲ್ಲಿ ಆಶೆಯುಳ್ಳವಳಾಗಿದಾಳೆ, ಈ ಚಂದ್ರವದನೆಯು ನನ್ನನ್ನು ನೋಡುತ್ತಾಳೆ, ಈ ಇಂದೀವರಾಕ್ಷಿಯು ನನ್ನನ್ನು ಹೊಂದುವಳು" ಎಂದು ತಿಳಿಯುತ್ತಾನೆ. ಅಯ್ಯೋ ಮೂರ್ಖನೇ! ಯಾರು ನಿನ್ನನ್ನು ಅಪೇಕ್ಷಿಸುತ್ತಾಳೆ, ಯಾರು ನಿನ್ನನ್ನು ನೋಡುತ್ತಾಳೆ, ಎಲೈ ಪಶುವೇ, ಮಾಂಸ, ಮೂಳೆ ಮೊದಲ ದವುಗಳಿಂದ ನಿರ್ಮಿಸಲ್ಪಟ್ಟ ನಾರಿ ಎಂಬ ಹೆಸರುಳ್ಳ ಈ ಪದಾರ್ಥವು ಜಡವಾದ ಕಾರಣ, ಯಾವುದನ್ನೂ ತಿಳಿಯಲಾರದು. ಅಂತರಾತ್ಮನಾದ ಪುರುಷನು ನೋಡುವನು.

ಪ್ರತೀಹಾರಿ—ಇಗೋ ಮಹಾರಾಜನು ಇಲ್ಲಿ ಕುಳಿತಿರುವನು.

ವಸ್ತುವಿಚಾರ—(ಸಮೀಪಕ್ಕೆ ಬಂದು) ಮಹಾರಾಜನೇ ಜಯವಾಗಲಿ (ಎಂದು ನಮಸ್ಕರಿಸುವನು)

ರಾಜ—ಇಲ್ಲಿ ಕುಳಿತುಕೊ.

ವಸ್ತುವಿಚಾರ—(ಕುಳಿತುಕೊಂಡು) ಮಹಾರಾಜನೇ, ಏನಪ್ಪಣೆ? ಅನುಗ್ರಹಿಸಬೇಕು.

ರಾಜ—ವಸ್ತುವಿಚಾರನೇ, ನಮಗೂ, ಮಹಾಮೋಹನಿಗೂ ಯುದ್ಧವು ಒದಗಿರುವುದು. ಆ ಮಹಾಮೋಹನಿಗೆ ಕಾಮನೇ ಪ್ರಥಮ ವೀರನು. ಅವನಿಗೆ ತಕ್ಕ ಪ್ರತಿವೀರನೆಂದು ನಿನ್ನನ್ನು ನಾನು ನಿಶ್ಚಯಿಸಿದ್ದೇನೆ.

ವಸ್ತುವಿಚಾರ—ಮಹಾರಾಜನ ಈ ಸನ್ಮಾನದಿಂದ ನಾನು ಧನ್ಯನಾದೆನು.

ರಾಜ—ಒಳ್ಳೇದು, ಯಾವ ಶಸ್ತ್ರವಿದ್ಯೆಯಿಂದ ನೀನು ಕಾಮನನ್ನು ಜಯಿಸುತ್ತೀಯೆ?

ವಸ್ತುವಿಚಾರ—ಇವನನ್ನು ಜಯಿಸುವುದಕ್ಕೆ ಶಸ್ತ್ರಗ್ರಹಣವೂ ಬೇಕೇ? ಆ ಕಾಮನಿಗೆ ಐದು ಬಾಣಗಳಿವೆ. ಆದ್ದರಿಂದ ಇವನು ಪಂಚಶರನು. ಪ್ರಯೋಜನವಿಲ್ಲದ ಹೂವೇ ಅವನ ಧನಸ್ಸು, ಮಹಾರಾಜನೇ, ಸಕಲಕ್ಕೂ ದ್ವಾರ

ವಾದ ಮನಸ್ಸನ್ನು ಬಾಗಿಲು ಮುಚ್ಚಿದಂತೆ ಮುಚ್ಚಿ, ಸ್ತ್ರೀಯರುಗಳ ದರ್ಶನದಲ್ಲಿಯೂ, ಮನಸ್ಸಿನಲ್ಲಿ ಸ್ಮರಿಸುವುದರಲ್ಲಿಯೂ, ಪರಿಣಾಮದಲ್ಲಿ ನೀರಸವೆಂತಲೂ, ದೇಹವು ಅಸಹ್ಯವೆಂತಲೂ, ಪ್ರತಿ ಕ್ಷಣದಲ್ಲಿಯೂ ಚಿಂತೆಯನ್ನುಂಟುಮಾಡಿ ಕಾಮನನ್ನು ಜಯಿಸುವೆನು.

ರಾಜ—ಇದು ಸರಿ. ಸಾಧುವಾಗಿದೆ.

ವಸ್ತುವಿಚಾರ—ಮತ್ತು ವಿಶಾಲವಾದ ಮರಳುಗಳುಳ್ಳ ನದಿಗಳು ಸರ್ವದಾ ಬೀಳುತ್ತಿರುವ ಗಿರಿನದೀ ಪ್ರವಾಹದಿಂದ ನುಣುಪಾಗಿರುವ ಕಲ್ಲುಗಳುಳ್ಳ ಪರ್ವತಗಳೂ, ದಟ್ಟವಾಗಿ ಬೆಳೆದಿರುವ ಮರಗಳಿಂದ ಕೂಡಿದ ವನಪಂಕ್ತಿಗಳೂ, ವ್ಯಾಸನಿರ್ಮಿತವಾದ ಶಾಂತಿಪ್ರಧಾನವಾದ ವಾಕ್ಯಗಳೂ, ತಿಳಿದವರ ಸಹವಾಸವೂ ಇರುವಾಗ, ಮಾಂಸದ ಮುದ್ದೆಯಾದ ಸ್ತ್ರೀಯರಾಗಲೀ, ಅವರನ್ನಾಶ್ರಯಿಸಿದ ಮನ್ಮಥನಾಗಲೀ ಎಲ್ಲಿ ನಿಲ್ಲುವರು ? ಮನ್ಮಥನಿಗೆ ಪ್ರಧಾನವಾದ ಅಸ್ತ್ರನೇ ನಾರಿಯು. ಅವಳನ್ನು ಜಯಿಸಿದ ಮೇಲೆ ಆ ಕಾಮನ ಸಹಾಯಕ್ಕೆ ನಿಂತಿರುವವರೆಲ್ಲರೂ ವ್ಯರ್ಥೋದ್ಯೋಗವುಳ್ಳವರಾಗಿ ನಾಶವಾಗುವರು. ಹೇಗೆಂದರೆ, ಚಂದ್ರನೂ, ಚಂದನವೂ, ಬೆಳದಿಂಗಳಿನಿಂದ ಕಂಗೊಳಿಸುವ ರಾತ್ರಿಯೂ, ಝೇಂಕರಿಸುವ ಭ್ರಮರಗಳಿಂದ ಕೂಡಿದ ಉದ್ಯಾನಗಳುಳ್ಳ ವಸಂತವಾಸರಗಳೂ, ಗಂಭೀರ ಧ್ವನಿಯುಳ್ಳ ಮೇಘಗಳಿಂದ ಪ್ರಕಾಶಿಸುವ ವರ್ಷಾಕಾಲವೂ, ಮಂದಮಾರುತವೂ, ಶೃಂಗಾರವೇ ಮೊದಲಾದ ಕಾಮನ ಸ್ನೇಹಿತರುಗಳೆಲ್ಲರೂ ನಾರಿಯೊಬ್ಬಳು ಜಯಿಸಲ್ಪಟ್ಟರೆ ಪರಾಜಿತರಾಗುವರು. ನಾವಕಾಶವೇಕೆ ? ಆಜ್ಞೆಯಾಗಬೇಕು. ಈ ನಾನು ವಿಚಾರಗಳೆಂಬ ಬಾಣಗಳನ್ನು ಎಲ್ಲಾ ಕಡೆಯಲ್ಲಿಯೂ ಪ್ರಯೋಗಿಸಿ, ಶತ್ರುಗಳ ಸೈನ್ಯವನ್ನು ಭಂಗಿಸಿ, ಕುರುಸೈನ್ಯವನ್ನು ಭಂಗಿಸಿ, ಸೈಂಧವನನ್ನು ಸಂಹರಿಸಿದ ಅರ್ಜುನನಂತೆ ಕಾಮನನ್ನು ಕೊಲ್ಲುವೆನು.

ರಾಜ—(ಪ್ರಸನ್ನನಾಗಿ) ಆದರೆ ನೀನು ಶತ್ರುವಿಜಯಕ್ಕೆ ಸಿದ್ಧನಾಗು.

ವಸ್ತುವಿಚಾರ—ಅಪ್ಪಣೆ (ಎಂದು ಹೊರಟು ಹೋಗುವನು)

ರಾಜ—ವೇದವತೀಯೇ, ಕ್ಷಮೆಯನ್ನು ಕರೆದುಕೊಂಡು ಬಾ.

ವೇದವತಿ—ಅಪ್ಪಣೆ (ಎಂದು ಹೋಗಿ ಕ್ಷಮೆಯೊಡನೆ ಪ್ರವೇಶಿಸುವಳು.)

ಕ್ಷಮೆ—ಕವಿದ ಕೋಪದಿಂದ ಹುಬ್ಬು ಗಂಟಿಕ್ಕಿ ಸಂಜೆಗೆಂಪಿನಂತೆ ಕೆಂಪಡರಿದ ಕಣ್ಣುಗಳುಳ್ಳ ಮಹಾ ಘೋರನಾದ ಪುರುಷನ ನಿಂದಾವಚನಗಳನ್ನು ನಿಶ್ಚಲವಾಗಿಯೂ, ನಿರ್ಮಲವಾಗಿಯೂ ಇರುವ ಸಮುದ್ರದಂತೆ ಗಂಭೀರರಾಗಿಯೂ ಇರುವ ಧೀರರಾದ ವೀರರೇ ಸಹಿಸುವರು. (ತನ್ನನ್ನು ತಾನೇ ಶ್ಲಾಘಿಸಿಕೊಳ್ಳುತ್ತಾ) ಕೋಪವನ್ನು ಜಯಿಸುವುದರಲ್ಲಿ ನಾನು ಒಬ್ಬಳೇ ಶ್ಲಾಘ್ಯಳು. ಏಕೆಂದರೆ, ಮಾತುಗಳ ಖರ್ಚಿಲ್ಲ, ಹೆಚ್ಚಾಗಿ ಕೂಗುವುದರಿಂದುಂಟಾಗುವ ತಲೆನೋವಿಲ್ಲ, ಮನಸ್ಸಿಗೆ ಸಂತಾಪವಿಲ್ಲ, ದೇಹಕ್ಕೆ ಆಯಾಸವಿಲ್ಲ, ಹಿಂಸೆಯೇ ಮೊದಲಾದ ಅನರ್ಥಗಳ ಸಂಬಂಧವೂ ಇಲ್ಲ.

ಪ್ರತೀಹಾರಿ—ಇಗೋ ಮಹಾರಾಜನು ಇಲ್ಲಿಯೇ ಇರುವನು.

ಕ್ಷಮೆ—(ಸಮೀಪಕ್ಕೆ ಬಂದು) ಜಯವಾಗಲಿ ಮಹಾರಾಜನಿಗೆ. ದಾಸಿಯಾದ ಕ್ಷಮೆಯು ಸಾಷ್ಟಾಂಗ ಪ್ರಣಾಮವನ್ನು ಮಾಡುವಳು (ಎಂದು ನಮಸ್ಕರಿಸುವಳು)

ರಾಜ—ಕ್ಷಮೆಯೇ ಇಲ್ಲಿ ಕುಳಿತುಕೋ.

ಕ್ಷಮೆ—(ಕುಳಿತುಕೊಂಡು) ಈ ದಾಸಿಯನ್ನು ಏಕೆ ಕರೆಸೋಣವಾಯಿತು ? ಅಪ್ಪಣೆಯಾಗಬೇಕು.

ರಾಜ—ಕ್ಷಮೆಯೇ, ಈಗ ಎದಗಿರುವ ಯುದ್ಧದಲ್ಲಿ ದುರಾತ್ಮನಾದ ಕ್ರೋಧನನ್ನು ನೀನು ಜಯಿಸಬೇಕು.

ಕ್ಷಮೆ—ಮಹಾರಾಜನೇ, ತಮ್ಮ ಅನುಗ್ರಹದಿಂದ ಮಹಾಮೋಹನನ್ನಾದರೂ ಜಯಿಸುವುದಕ್ಕೆ ಸಮರ್ಥಳಾಗಿದ್ದೇನೆ. ಅವನ ಅನುಚರನಾದ ಕೇವಲ ಕ್ರೋಧನೊಬ್ಬನನ್ನು ಜಯಿಸುವುದು ಏನು ದೊಡ್ಡ ಕೆಲಸವು ! ಕೇವಲ ಪಾಪಕೆಲಸದಲ್ಲಿ ನಿರತನಾಗಿ, ವೇದಾಧ್ಯಯನ, ದೇವಯಜ್ಞ, ಪಿತೃಯಜ್ಞ, ತಪಸ್ಸು, ಈ ಕೆಲಸಗಳಿಗೆ ಮಹಿಷಾಸುರನಂತೆ ನಿಷ್ಪ್ರಯೋಜನವಾಗಿ ತೊಂದರೆಯನ್ನುಂಟುಮಾಡುತ್ತಾ ಕಿಡಿಗಳನ್ನು ದರಿಸುವಂತೆ ದೃಷ್ಟಿಯುಳ್ಳ ಕ್ರೋಧ

ನನ್ನ ಆ ಮಹಿಷಾಸುರನನ್ನು ಕಾತ್ಯಾಯಿನಿಯು ಸಂಹರಿಸಿದಂತೆ ಸಂಹರಿಸು ವೆನು.

ರಾಜ—ಕ್ಷಮೆಯೇ, ಕ್ರೋಧನನ್ನು ಜಯಿಸುವುದಕ್ಕೆ ನೀನು ಮಾಡುವ ಉಪಾ ಯವನ್ನು ಕೇಳಲಪೇಕ್ಷಿಸುತ್ತೇನೆ.

ಕ್ಷಮೆ—ಮಹಾರಾಜನೇ, ವಿಜ್ಞಾಪಿಸುವೆನು. "ಕೋಪವುಂಟಾದವನಲ್ಲಿ ಹಸನ್ಮು ಖನಾಗುವುದೂ, ಕೋಪವು ಹೆಚ್ಚಿದವನಲ್ಲಿ "ಕ್ಷಮಿಸಬೇಕು, ಮಹಾನುಗ್ರಹ ವೆಂದು ಹೇಳುವುದೂ, ಇನ್ನೂ ಕೋಪವು ಹೆಚ್ಚಿ ಬೈಯ್ಯಲಾರಂಭಿಸಿದರೆ ಆಶೀರ್ವಾದವೆಂದು ಭಾವಿಸುವುದೂ, ಅದೂ ಮೀರಿ ನಡೆದರೆ, ನಾನು ಮಾಡಿದ ಪಾಪಕ್ಕೆ ದೇವರು ಈ ರೀತಿ ಶಿಕ್ಷೆಯನ್ನು ಕೊಟ್ಟನು, ಸದ್ಯಃ ನನ್ನ ಪಾಪವು ಪರಿಹಾರವಾಯಿತು ಎಂದು ಭಾವಿಸಿ ಸಂತೋಷ ಪಡು ವುದೂ, ಈ ದೊಡ್ಡ ವಿಪತ್ತು ದೈವದಿಂದ ಉಂಟಾಗಿರುವುದಾದ ಕಾರಣ ನಮ್ಮಿಂದ ಪರಿಹರಿಸಲು ಅಸಾಧ್ಯವು, ಚಪಲಚಿತ್ತರಾಗಬಾರದು ಎಂಬ ದಾಗಿ ದಯಾರಸದಿಂದ ತೋಯಿದ ಮನಸ್ಸುಳ್ಳವರಿಗೆ ಕ್ರೋಧನು ಎಲ್ಲಿರು ವನು ?

ರಾಜ—ಸಾಧುವಾದ ಉಪಾಯವು.

ಕ್ಷಮೆ—ಮಹಾರಾಜನೇ, ಕ್ರೋಧನೊಬ್ಬನನ್ನು ಜಯಿಸಿದರೆ, ಹಿಂಸೆ, ಪಾರುಷ್ಯ, ಮಾನ, ಮಾತ್ಸರ್ಯ, ಇವರುಗಳೂ ಸಹ ಪರಾಜಿತರಾಗುವರು.

ರಾಜ—ನೀನು ಜಯಕ್ಕೆ ಹೊರಡು.

ಕ್ಷಮೆ—ಅಪ್ಪಣೆ (ಎಂದು ಹೋಗುವಳು)

ರಾಜ—ವೇದವತಿಯೇ, ಸಂತೋಷನನ್ನು ಕರೆದುಕೊಂಡು ಬಾ.

ಪ್ರತೀಹಾರಿ—ಅಪ್ಪಣೆ (ಎಂದು ಹೋಗಿ ಸಂತೋಷನೊಂದಿಗೆ ಪ್ರವೇಶಿಸುವಳು)

ಸಂತೋಷ—(ಹಾಗೆಯೇ ಯೋಚಿಸಿ ಪಶ್ಚಾತ್ತಾಪದೊಡನೆ) ದೀನರಾದ ಜನರು ಧನಿಕರ ಮನೆಯ ಬಾಗಿಲಲ್ಲಿ ವ್ಯರ್ಥವಾಗಿ ಸಂತಾಪ ಪಡುವರು. ಇವರಿಗೆ ಏನು ಕಡಮೆಯಾಗಿರುವುದು ? ಪ್ರತಿ ವನಗಳಲ್ಲಿಯೂ ಮರಗಳಲ್ಲಿ ಶ್ರಮ ವಿಲ್ಲದೆ ಬೇಕಾದ ಹಾಗೆ ಹಣ್ಣುಗಳು ಸಿಕ್ಕುವುವು. ಎಲ್ಲೆಲ್ಲಿಯೂ ಪುಣ್ಯ ನದಿಗಳ ಮಧುರಗಳಾದ ನೀರುಗಳು ಸುಲಭವಾಗಿ ದೊರಕುವುವು.

  

ಮೃದುವಾದ ಬಳ್ಳಿಗಳ ಚಿಗುರುಗಳು ಯಾವ ಹಾಸಿಗೆಗೆ ಕಡಮೆಯಾಗಿವೆ ? ಹೀಗಿದ್ದರೂ ವ್ಯರ್ಥವಾಗಿ ಕಷ್ಟಪಡುವರಲ್ಲಾ ! (ಆಕಾಶದತ್ತ ಲಕ್ಷ್ಯವಿಟ್ಟು) ಎಲೈ ಮೂರ್ಖನಾದ ಲೋಭಿಯೇ, ನಿನ್ನ ಈ ವ್ಯಾಮೋಹವು ಅಪರಿಹಾರ್ಯವಲ್ಲವೇ ? ಎಲೈ ಪಶುವೇ, ತುಚ್ಛವಾದ ದ್ರವ್ಯವೆಂಬ ಈ ಮರೀಚಿಕಾ ಜಲದಲ್ಲಿ ನೀರು ಕುಡಿಯಲಪೇಕ್ಷಿಸುವ ನಿನ್ನ ವ್ಯವಸಾಯಗಳು ಎಷ್ಟಾವರ್ತಿ ಭಗ್ನಗಳಾಗಲಿಲ್ಲ ! ಆದರೂ ನಿನಗೆ ಈಗಲೂ ಪ್ರತ್ಯಾಶೆ ಮುಗಿಯಲಿಲ್ಲವೇ ? ಇಂತಹ ನಿನ್ನ ಮನಸ್ಸು ವಜ್ರಾಯುಧದಂತೆ ಕಠಿಣವಾದ ಕಲ್ಲಿನಿಂದ ಮಾಡಲ್ಪಟ್ಟಿರಬೇಕು. ಅದ ಆದ್ದರಿಂದಲೇ ಚೂರುಚೂರಾಗಿ ಒಡೆದುಹೋಗುವುದಿಲ್ಲ. ಕತ್ತಲೆಯಂತೆ ಕವಿದುಕೊಂಡ ಲೋಭದಿಂದ ನಷ್ಟಪ್ರಾಯನಾದ ನಿನ್ನ ವ್ಯಾಪಾರವು ಮನಸ್ಸಿಗೆ ಆಶ್ಚರ್ಯವನ್ನುಂಟುಮಾಡುತ್ತದೆ. ಏಕೆಂದರೆ, “ ಇದು ದೊರೆಯಿತು, ಇದು ದೊರೆಯಬೇಕು, ಅದರಿಂದ ಇಷ್ಟು ಬಡ್ಡಿ ಬರಬೇಕು, ಆ ಬಡ್ಡಿಯಿಂದ ಇಷ್ಟು ಬಡ್ಡಿ ಬರಬೇಕು ” ಎಂದು ಯಾವಾಗಲೂ ದ್ರವ್ಯವನ್ನೇ ಧ್ಯಾನಿಸುತ್ತೀಯೆ. ಆಶ್ಚರ್ಯ! ಆಶೆ ಎಂಬ ಪಿಶಾಚವು ಲೋಭದಿಂದ ಮೂಢನಾದ ನಿನ್ನನ್ನು ಬಹು ಶೀಘ್ರವಾಗಿಯೇ ಸಂಪೂರ್ಣವಾಗಿ ನುಂಗಿಬಿಡುವುದೆಂಬ ಸಂಗತಿಯನ್ನು ನೀನು ತಿಳಿದುಕೊಳ್ಳುವುದಿಲ್ಲ. ಇದೂ ಅಲ್ಲದೆ, ಬಹಳ ಕಷ್ಟಪಟ್ಟು ಸಂಪಾದಿಸಿದ ದ್ರವ್ಯವು ಯಾವಾಗಲೂ ನಿನ್ನನ್ನು ಬಿಟ್ಟು ಅಗಲುವುದಿಲ್ಲವೇ ? ಅದು ನಾಶವಾದರೂ, ಅಥವಾ ನೀನೇ ನಾಶವಾದರೂ ಆ ದ್ರವ್ಯದ ವಿಯೋಗವು ಹೇಗೂ ತಪ್ಪಿದ್ದಲ್ಲವಷ್ಟೆ. ಹೀಗಿರುವಾಗ, ಅದನ್ನು ಕಷ್ಟಪಟ್ಟು ಸಂಪಾದಿಸಿ, ಅದು ನಾಶವಾಗುವುದು ಶ್ರೇಯಸ್ಸೇ ? ಅಥವಾ ಸಂಪಾದಿಸದೇನೇ ಇರುವುದು ಶ್ರೇಯಸ್ಸೇ ? ಯೋಚಿಸಿ ಹೇಳು. ದೊರೆತದ್ದು ನಾಶವಾಗುವುದರಿಂದ ಉಂಟಾಗುವ ವ್ಯಥೆಯು ಸಂಪಾದನೆಯೇ ಇಲ್ಲದಿದ್ದರೆ ಉಂಟಾಗುವ ವ್ಯಥೆಗಿಂತಲೂ ನೂರು ಪಾಲು ಹೆಚ್ಚಲ್ಲವೇ ? ಮತ್ತು ತಲೆಯ ಮೇಲೆ ಮೃತ್ಯುವು ಸಂತೋಷದಿಂದ ಕೂತಿರುವುದು. ಮುಪ್ಪೆಂಬ ಘೋರ ಸರ್ಪವು ನಿನ್ನನ್ನು ನುಂಗುತ್ತಲೇ ಇರುವುದು. ನೀನು ಪರಿಗ್ರಹಿಸಿರುವ ಪತ್ನೀಪುತ್ರಾದಿಗಳು ನಿನ್ನ ಸರ್ವಸ್ವವನ್ನೂ ಹದ್ದುಗಳಂತೆ ತಿಂದು

ಹಾಕುವರು. ಆದಕಾರಣ ಅಜ್ಞಾನದಿಂದ ತುಂಬಿರುವ ಈ ಲೋಭದ ದೋಷವನ್ನು ಜ್ಞಾನಜಲದಿಂದ ತೊಳೆದು ಅಮೃತ ಸಂತೋಷವೆಂಬ ಜಲದಲ್ಲಿ ಮುಳುಗಿ ಸುಖಿಯಾಗು.

ಪ್ರತೀಹಾರೀ—ಇಗೋ ಮಹಾರಾಜನು.

ಸಂತೋಷ—(ಸಮೀಪಕ್ಕೆ ಹೋಗಿ) ಮಹಾರಾಜನಿಗೆ ಜಯವಾಗಲಿ (ಎಂದು ನಮಸ್ಕರಿಸುವನು.)

ರಾಜ—ಇಲ್ಲಿ ಕುಳಿತುಕೋ (ಎಂದು ತನ್ನ ಪಕ್ಕದಲ್ಲಿ ಕುಳ್ಳಿರಿಸಿಕೊಳ್ಳುವನು.)

ಸಂತೋಷ—(ಬಹಳ ವಿನಯದಿಂದ ಕುಳಿತುಕೊಂಡು) ದಾಸನಿಗೆ ಏನಪ್ಪಣೆ.

ರಾಜ—ನಿನ್ನ ಪ್ರಭಾವವು ನಮಗೆ ತಿಳಿದೇ ಇದೆ. ಲೋಭನನ್ನು ಜಯಿಸುವುದಕ್ಕೆ ಈಗಲೇ ವಾರಾಣಸಿಗೆ ಪ್ರಯಾಣ ಮಾಡು.

ಸಂತೋಷ—ಅಪ್ಪಣೆಯಾದಂತೆ ಸಿದ್ಧನಾಗಿರುವೆನು. ಈ ನಾನು ನಾನಾಮುಖದಿಂದ ಮೂರು ಲೋಕವನ್ನೂ ಜಯಿಸಿ, ದೇವಬ್ರಾಹ್ಮಣರುಗಳ ವಧದಿಂದಲೂ, ಬಂಧನದಿಂದಲೂ ರಾವಣನಂತೆ ಅಧಿಕವಾಗಿ ಮೆರೆಯುತ್ತಾ ಇರುವ ಲೋಭನನ್ನು ರಾಮನಂತೆ ನಿಗ್ರಹಿಸಿ ಪುಡಿಮಾಡುವೆನು (ಎಂದು ಹೋಗುವನು.)

(ವಿನೀತವೇಷದಿಂದ ಒಬ್ಬ ಪುರುಷನು ಪ್ರವೇಶಿಸುವನು)

ಪುರುಷ—ಮಹಾರಾಜನೇ, ವಿಜಯ ಪ್ರಯಾಣಕ್ಕೆ ಬೇಕಾದ ಮಂಗಳಗಳೆಲ್ಲವೂ ಸಿದ್ಧವಾಗಿವೆ. ಜ್ಯೋತಿಷ್ಕರು ಗೊತ್ತುಮಾಡಿದ್ದ ಪ್ರಯಾಣ ಲಗ್ನ ಸಮಯವು ಸನ್ನಿಹಿತವಾಗಿದೆ.

ರಾಜ—ಹಾಗಾದರೆ ಸೇನಾಪತಿಗಳಿಗೆ ಸೈನ್ಯಪ್ರಯಾಣಕ್ಕೆ ಆಜ್ಞಾಪಿಸು.

ಪುರುಷ—ಅಪ್ಪಣೆ (ಎಂದು ಹೊರಟು ಹೋಗುವನು) (ತೆರೆಯಲ್ಲಿ) ಒಳ್ಳೇ ಮದಿಸಿದ ಆನೆಗಳು ಸಿದ್ಧವಾಗಲಿ. ವಾಯುವಿನಂತೆ ವೇಗಶಾಲಿಗಳಾದ ಕುದುರೆಗಳನ್ನು ರಥಗಳಿಗೆ ಕಟ್ಟಿರಿ. ಪದಾತಿಗಳು ಕುಂತಾಯುಧಗಳಿಂದ ದಿಕ್ಕುಗಳ ಮಧ್ಯಭಾಗವನ್ನು ನೈದಿಲೇ ಹೂವುಗಳ ಸಮೂಹದಿಂದ ಕೂಡುವಂತೆ ಮಾಡುತ್ತಾ ಹೊರಡಲಿ. ಕುದುರೆಯ ಸವಾರರುಗಳು ಮಸಾ ತೀಕ್ಷ್ಣವಾದ ಕತ್ತಿಗಳನ್ನು ಧರಿಸಿಕೊಂಡು ಹೊರಡಲಿ.

ರಾಜ—ಪಾರಿಪಾರ್ಶ್ವಕನೇ, ಯುದ್ಧಯೋಗ್ಯವಾದ ರಥವನ್ನು ಸಿದ್ಧಪಡಿಸುವಂತೆ ಸಾರಥಿಗೆ ತಿಳಿಯಪಡಿಸು.

ಪಾರಿಪಾರ್ಶ್ವ—ಅಪ್ಪಣೆ (ಎಂದು ಹೋಗುವನು) ಸಾರಥಿಯು ಸಿದ್ಧಪಡಿಸಿದ ರಥದೊಡನೆ ಪ್ರವೇಶಿಸುವನು.

ಸಾರಥಿ—ಮಹಾರಾಜನೇ, ಇಗೋ ರಥವು ಸಿದ್ಧವಾಗಿರುವುದು.

ರಾಜ—(ಮಂಗಳ ಕೃತ್ಯಗಳನ್ನು ನೆರವೇರಿಸಿ ರಥವನ್ನು ಹತ್ತುವನು)

ಸಾರಥಿ—ರಥವೇಗವನ್ನು ತೋರಿಸುತ್ತಾ, ಆಯುಷ್ಮಂತನೇ, ನೋಡು, ನೋಡು. ಈ ಕುದುರೆಗಳು ಸಮುದ್ರಮಥನದ ಧ್ವನಿಯಂತೆ ಧ್ವನಿಮಾಡುತ್ತಲಿರುವ ರಥವನ್ನು ಆಕಾಶದಲ್ಲಿಯೇ ತೆಗೆದುಕೊಂಡು ಹೋಗುತ್ತವೆ. ಧೂಳುಗಳಿಂದ ಮಾತ್ರವೇ ಕುದುರೆಗಳ ಗೊರಸುಗಳು ಭೂಮಿಗೆ ತಗಲಿರಬಹುದೆಂದು ಊಹಿಸಬೇಕಾಗಿದೆ. ಲೋಕಪಾವನೆಯಾದ ಕಾಶೀ ನಗರವು ಸಮೀಪದಲ್ಲಿಯೇ ಕಾಣುವುದು. ಈ ನಗರದ ಚಂದ್ರನ ಕಿರಣದಂತೆ ಬೆಳ್ಳಗಿರುವ ಸೌಧಶಿಖರಗಳು ಜಲಯಂತ್ರಗಳಿಂದ ಝುಳ್ಳೆಂದು ಸುರಿಯುವ ನೀರಿನಿಂದ ಬಹಳ ಸುಂದರಗಳಾಗಿವೆ. ಇವುಗಳ ಮೇಲೆ ಕಟ್ಟಿರುವ ನಾನಾವಿಧವಾದ ಧ್ವಜಗಳು ಶರತ್ಕಾಲದ ಧವಳ ಮೇಘಗಳಲ್ಲಿ ಮಿಂಚುಗಳು ಹೊಳೆಯುವಂತೆ ಹೊಳೆಯುವುವು. ಇವುಗಳೇ ಈ ನಗರದ ಉದ್ಯಾನ ಭೂಮಿಗಳು. ಇಲ್ಲಿ ಬೆಳೆದಿರುವ ಮರಗಳ ನೆರಳಿನಿಂದ ಸೂರ್ಯರಶ್ಮಿಯೇ ಕೆಳಗೆಬೀಳದಂತೆ ಕತ್ತಲೆಯು ಕವಿದು ಕಪ್ಪಗೆ ಕಾಣುವುದು. ಈ ಉದ್ಯಾನದಲ್ಲಿ ಹೂವಿನ ಬಳ್ಳಿಗಳಲ್ಲಿ ಮೊಗ್ಗುಗಳ ಮೇಲೆ ಭ್ರಮರಗಳು ಕುಳಿತುಕೊಂಡು ಝೇಂಕರಿಸುತ್ತವೆ. ಹೂವುಗಳು ಅರಳುವುದಕ್ಕೆ ಆರಂಭವಾಗಿ, ಅವುಗಳಿಂದ ಮಕರಂದಗಳು ಸುರಿಯುತ್ತಲಿವೆ. ಇಲ್ಲಿ ಬೀಸುವ ವಾಯುವೂ ಕೂಡ ಪಾಶುಪತ ವ್ರತವನ್ನು ಕೈಕೊಂಡ ತಾಪಸರಂತೆ ಕಾಣುತ್ತದೆ. ಇಲ್ಲಿನ ಲತೆಗಳು ಗಂಗಾನದಿಯ ತುಂತುರುಗಳಿಂದ ಆರ್ದ್ರಗಳಾಗಿಯೂ, ಪುಷ್ಪಪರಾಗಗಳಿಂದ ಶುಭ್ರಗಳಾಗಿಯೂ ಕಾಣುತ್ತವೆ. ಮರದಿಂದ ಬೀಳುವ ಕುಸುಮಗಳು ಚಂದ್ರಮೌಳಿಯನ್ನು ಪೂಜಿಸುವಂತಿವೆ. ಭ್ರಮರ ಧ್ವನಿಗಳು ಸ್ತೋತ್ರಪಾಠಗಳನ್ನು ರಾಗವಾಗಿ ಪಠಿಸುವಂತಿವೆ. ಬಳ್ಳಿಗಳು ಭುಜಗಳಿಂದ ನರ್ತನ ಮಾಡುವಂತೆ ಕಾಣುತ್ತವೆ.

ರಾಜ—(ನೋಡಿ ಸಂತೋಷದಿಂದ) ಈಶ್ವರನ ವ್ಯಾಸಸ್ಥಾನವಾದ ಪರಮಮುಕ್ತಿ ಕ್ಷೇತ್ರವಾದ ಈ ಕಾಶಿಯು ಅಜ್ಞಾನವನ್ನು ನಾಶಮಾಡಿ, ಸ್ವಯಂಪ್ರಕಾಶವಾದ ಆನಂದವನ್ನು ಹೊರಪಡಿಸುತ್ತಾ ಮನೋಹರವಾಗಿ ಕಾಣುವುದು. ಇಲ್ಲಿ ಗಂಗಾ ನದಿಯು ಭೂಮಿಯ ಕತ್ತಿನಲ್ಲಿರುವ ಮುತ್ತಿನ ಸರದಂತೆ ವಕ್ರವಾಗಿ ಹರಿಯುತ್ತಾ, ಚಂದ್ರಕಳೆಯನ್ನು ನೊರೆಗಳ ಸಮೂಹದಿಂದ ಪರಿಹಾಸ ಮಾಡುವಂತೆ ಕಾಣುತ್ತದೆ.

ಸಾರಥಿ—ಆಯುಷ್ಮಂತನೇ, ಇಲ್ಲಿ ನೋಡು. ಇದು ಗಂಗಾ ತೀರಕ್ಕೆ ಅಲಂಕಾರವಾದ ತ್ರಿಲೋಕ ಗುರುವಾದ ವಿಶ್ವೇಶ್ವರನೆಂಬ ಮಹಾದೇವನ ತ್ರಿಭುವನ ಪಾವನವಾದ ದೇವಸ್ಥಾನವು.

ರಾಜ—(ಸಂತೋಷದಿಂದ) ಈ ಈಶ್ವರನು ಈ ಕ್ಷೇತ್ರಕ್ಕೆ ಅಭಿಮಾನಿ ದೇವತೆಯೆಂದು ಕ್ಷೇತ್ರಮಹಿಮೆಯನ್ನು ಬಲ್ಲ ವ್ಯಾಸಾದಿಗಳು ಹೇಳುವರು ಇಲ್ಲಿ ದೇಹವನ್ನು ಬಿಟ್ಟ ಪುಣ್ಯಶಾಲಿಗಳು ಈ ವಿಶ್ವೇಶ್ವರನನ್ನೇ ಹೊಂದುವರು.

ಸಾರಥಿ—ಆಯುಷ್ಮಂತನೇ, ಈ ಕಾಮ, ಕ್ರೋಧ, ಲೋಭಾದಿಗಳು ನಮ್ಮನ್ನು ಕಂಡೊಡನೆಯೇ ಈ ಸ್ಥಳವನ್ನು ಬಿಟ್ಟು ದೂರವಾಗಿ ಹೋಗುತ್ತಿರುವುದನ್ನು ನೋಡು.

ರಾಜ—ಇಜ, ಅದಿರಲಿ. ದೇವಸ್ಥಾನಕ್ಕೆ ಹೋಗಿ ನಮ್ಮ ಇಷ್ಟಾರ್ಥಸಿದ್ಧಿಗೋಸ್ಕರ ದೇವನನ್ನು ನಮಸ್ಕರಿಸೋಣ (ಎಂದು ರಥದಿಂದಿಳಿದು ದೇವಸ್ಥಾನಕ್ಕೆ ಹೋಗಿ) ಭಗವನ್ ! ಜಯಶೀಲನಾಗುವಂತೆ ಅನುಗ್ರಹ ಮಾಡು. ಶುದ್ಧ ಜ್ಞಾನಸ್ವರೂಪನಾಗಿಯೂ, ಮೂರು ವೇದಗಳೂ ಮೂರು ಕಣ್ಣಾಗುಳ್ಳವನಾಗಿಯೂ, ಜ್ಞಾನಪ್ರಾಪ್ತಿಗೆ ಕಾರಣಭೂತನಾಗಿಯೂ, ಅರ್ಧದೇಹದಲ್ಲಿ ಪಾರ್ವತಿಯನ್ನು ಧರಿಸಿರುವ ನಿನಗೆ ನಮಸ್ಕಾರವು (ಎಂದು ನಮಸ್ಕರಿಸುವನು)

ಸಾರಥಿ—ಇದು ಆದಿಕೇಶವನಾದ ವಿಷ್ಣುವಿನ ಮಂದಿರವು.

ರಾಜ —(ಅಲ್ಲಿಗೆ ಹೋಗಿ ಭಗವಂತನಾದ ಆದಿಕೇಶವನನ್ನ ಪ್ರದಕ್ಷಿಣೆ ಮಾಡಿ) ಎಲೈ ಭಗವಂತನೇ, ನಿನ್ನ ಪಾದಕಮಲಗಳನ್ನು ದೇವತೆಗಳು ತಮ್ಮ ಚೂಡಾಮಣಿಗಳಿಂದ ಬೆಳಗುವರು. ನಿನ್ನ ಆಸನವಾದ ಸ್ವರ್ಣಪೀಠವು

ಹೊಳೆಯುವ ಉಗುರುಗಳ ಕಾಂತಿಗಳಿಂದ ಚಿತ್ರವರ್ಣವಾಗಿದೆ. ನೀನು ದ್ವೈತಭ್ರಾಂತಿಯಿಂದ ಭ್ರಾಂತರಾದ ಭಕ್ತಜನಗಳ ಸಂಸಾರ ನಿದ್ರೆಯನ್ನು ಪರಿಹರಿಸಿ ಕಾಪಾಡುವುದರಲ್ಲಿ ಸಮರ್ಥನಾಗಿದ್ದೀಯೆ. ಆದಿ ವರಾಹಾವತಾರವನ್ನು ಮಾಡಿ, ಭೂಮಂಡಲವನ್ನು ಉದ್ಧರಿಸುವಾಗ, ನಿನ್ನ ಕೋರೆಹಲ್ಲುಗಳ ತುದಿಯಲ್ಲಿ ಪ್ರಕಾಶಿಸುವ ಭೂಮಿಯುಳ್ಳವನಾದೆ. ತ್ರಿವಿಕ್ರಮಾವತಾರವನ್ನೆತ್ತಿ ಮೂರು ಲೋಕವನ್ನೂ ನಿನ್ನ ಪಾದವಿನ್ಯಾಸದಿಂದ ಆಕ್ರಮಿಸಿದೆ. ಕೃಷ್ಣಾವತಾರದಲ್ಲಿ ಗೋಪಜನಗಳು ಗೋವರ್ಧನ ಪರ್ವತವನ್ನು ಪೂಜಿಸಿದ್ದಕ್ಕೆ, ಇಂದ್ರನು ಖತಿಗೊಂಡು, ಚಂಡಮೇಘಗಳಿಂದ ಪ್ರಚಂಡ ಮಳೆಯನ್ನು ಸುರಿಸಲು, ಗೋವರ್ಧನ ಪರ್ವತವನ್ನು ಛತ್ರದಂತೆ ಕೈಯ್ಯಲ್ಲಿ ಧರಿಸಿ, ಗೋಪಕುಲಗಳನ್ನು ಕಾಪಾಡಿ, ಸಮಸ್ತ ಪ್ರಪಂಚಕ್ಕೂ ಆಶ್ಚರ್ಯವನ್ನುಂಟುಮಾಡಿದೆ. ಎಲೈ ಪ್ರಭುವೇ, ದೇವಶತ್ರುಗಳಾದ ರಾಕ್ಷಸರನ್ನು ಸಂಹರಿಸಿ, ಆ ರಾಕ್ಷಸ ಸ್ತ್ರೀಯರುಗಳ ಬೈತಲೆಯ ಸಿಂಧೂರ ಕಾಂತಿಯನ್ನು ಹೋಗಲಾಡಿಸಿದೆ. ಹಿರಣ್ಯಕಶಿಪುವಿನ ವಕ್ಷಸ್ಥಳವನ್ನು ಉಗುರುಗಳಿಂದ ಛೇದಿಸುವಾಗ, ಈ ಮೂರು ಲೋಕವೂ ಮುಳುಗುವಂತೆ ಅವನ ದೇಹದಿಂದ ಸಮುದ್ರದ ಹಾಗೆ ರಕ್ತವನ್ನು ಸುರಿಸಿದೆ. ಮೂರು ಲೋಕಕ್ಕೂ ಶತ್ರುವಾದ ಮಧು, ಕೈಟಭರೆಂಬ ರಾಕ್ಷಸರ ಕಠೋರವಾದ ಕಂಠವನ್ನು ನೀನು ಕೈಯ್ಯಲ್ಲಿ ಪ್ರಕಾಶಿಸುವ ಮಹಾತೇಜಃಪುಂಜವಾದ ಈ ಚಕ್ರದಿಂದ ಕತ್ತರಿಸಿದೆ. ನೀನು ಚಂದ್ರಾರ್ಧಶೇಖರಪ್ರಿಯನಾಗಿರುವೆ. ನಿನ್ನ ವಕ್ಷಸ್ಥಳವು ನಿನ್ನ ದೋರ್ದಂಡಗಳಿಂದ ಮಥಿಸಿದ ಕ್ಷೀರಸಮುದ್ರದಿಂದ ಹುಟ್ಟಿದ ಲಕ್ಷ್ಮಿಯ ಸಂಶ್ಲೇಷವುಳ್ಳದ್ದಾಗಿದೆ. ಎಲೈ ವೈಕುಂಠನೇ, ಸ್ಥೂಲಸೂಕ್ಷ್ಮಗಳಾದ ಮುತ್ತುಗಳಿಂದ ಪ್ರಕಾಶಿಸುವ ಹಾರಪ್ರಭಾಮಂಡಲದಿಂದ ವಿರಾಜಿಸುವ ಕಂಠವುಳ್ಳವನೇ, ಭಕ್ತರುಗಳಿಗೆ ಸಂಸಾರ ಮೋಹವನ್ನು ಹೋಗಲಾಡಿಸುವ ಜ್ಞಾನವನ್ನು ಕೊಡು. ದೇವದೇವನೇ, ನಿನಗೆ ನಮಸ್ಕಾರವು, ನಿನಗೆ ನಮಸ್ಕಾರವು, ನಿನಗೆ ನಮಸ್ಕಾರವು (ಎಂದು ಸಾಷ್ಟಾಂಗ ಪ್ರಣಾಮವನ್ನು ಮಾಡಿ) ಈ ಪ್ರದೇಶವು ನಮ್ಮ ವಾಸಕ್ಕೆ ಪ್ರಶಸ್ತವಾಗಿರುವುದು. ಇಲ್ಲಿಯೇ ಸೈನ್ಯವನ್ನು ನಿಲ್ಲಿಸೋಣ ಎಂದು ಹೊರಟು ಹೋಗುವರು.

# ಪಂಚಮಾಂಕ

(ಶ್ರದ್ಧೆಯು ಪ್ರವೇಶಿಸುವಳು)

ಶ್ರದ್ಧೆ—(ಹಾಗೆಯೇ ಯೋಚಿಸಿ) ಜ್ಞಾತಿಗಳಿಗೆ ಪರಸ್ಪರ ವೈರವುಂಟಾಗಿ, ಅದರಿಂದ ಹೆಚ್ಚಿದ ಕೋಪವು ಕಾಡಿನಲ್ಲಿ ಗಾಳಿಗಳಿಂದ ಮರಗಳು ಒಂದಕ್ಕೊಂದಕ್ಕೆ ಸೇರಿ ಘರ್ಷಣ ಮಾಡುವುದರಿಂದ ಉಂಟಾಗುವ ಬೆಂಕಿಯು ಆ ಕಾಡನ್ನೆಲ್ಲವನ್ನೂ ಸುಡುವಂತೆ ಕುಲವನ್ನೆಲ್ಲವನ್ನೂ ಸುಟ್ಟುಬಿಡುವುದು. ಇದು ಪ್ರಸಿದ್ಧವಾಗಿಯೇ ಇದೆ. (ಕಣ್ಣೀರು ಬಿಡುತ್ತಾ) ಅಯ್ಯೋ ಸಹೋದರರ ವ್ಯಸನದಿಂದ ಹುಟ್ಟಿದ ಶೋಕಾಗ್ನಿಯು ಬಹು ದಾರುಣವಾದದ್ದು. ಆರಿಸುವುದಕ್ಕಾಗುವುದಿಲ್ಲ. ಹುಟ್ಟಿದವರು ಸಾಯುವುದು ನಿಜವೇ. ಸಮುದ್ರವೂ, ದೊಡ್ಡ ದೊಡ್ಡ ಪರ್ವತಗಳೂ, ನದಿಗಳೂ, ಇವುಗಳಿಗೂ ಕೂಡ ನಾಶವು ಸಿದ್ಧವಾಗಿಯೇ ಇದೆ. ಹುಲ್ಲಿನಂತಿರುವ ಅಲ್ಪ ಪ್ರಾಣಿಗಳಲ್ಲಿ ಹೇಳತಕ್ಕದ್ದೇನು ! ಇಷ್ಟು ತಿಳಿದಿದ್ದಾಗ್ಯೂ, ಬಂಧುಗಳ ಮರಣದಿಂದ ಹುಟ್ಟಿದ ಶೋಕಾಗ್ನಿಯು ವಿವೇಕವನ್ನು ಮೂಲೆಗೆ ಒತ್ತಿ, ಮಹಾ ಕ್ರೂರವಾಗಿ ಹೃದಯವನ್ನು ಸುಡುತ್ತಿದೆ. ಸಹೋದರರಾದ ಕಾಮ ಕ್ರೋಧಾದಿಗಳು ಕ್ರೂರಸ್ವಭಾವವುಳ್ಳವರು. ಆದರೂ ಅವರು ಕಥಾಶೇಷರಾದ್ದಕ್ಕೆ ನನ್ನ ಹೃದಯದಲ್ಲಿ ಬೆಂಕಿಯ ಜ್ವಾಲೆಯಂತೆ ದುಃಖವು ಜ್ವಲಿಸುತ್ತಾ, ಮರ್ಮಸ್ಥಾನಗಳನ್ನು ಕತ್ತರಿಸುವಂತಿದೆ. ದೇಹವನ್ನು ಒಣಗಿಸುವಂತಿದೆ. ಮನಸ್ಸನ್ನು ಸುಡುವಂತಿದೆ. (ಹಾಗೆಯೇ ಆಲೋಚಿಸಿ) ದೇವಿಯಾದ ವಿಷ್ಣುಭಕ್ತಿಯು ನನ್ನನ್ನು ಕುರಿತು ವತ್ಸೆ, ಶ್ರದ್ಧೆ, ನಾನು ಇಲ್ಲಿ ಹಿಂಸಾಪ್ರಚುರವಾದ ಯುದ್ಧವನ್ನು ನೋಡಲಾರೆನು. ಆದುದರಿಂದ ಕಾಶಿಯನ್ನು ಬಿಟ್ಟು ಸಾಲಿಗ್ರಾಮ ಕ್ಷೇತ್ರದಲ್ಲಿ ಕೆಲವು ಕಾಲವನ್ನು ಕಳೆಯುತ್ತೇನೆ. ನಡೆದ ವೃತ್ತಾಂತವನ್ನು ನೀನು ನನಗೆ ತಿಳಿಸು (ಎಂದು ಆಜ್ಞಾಪಿಸಿರುವಳು) ಆದುದರಿಂದ ನಾನು ದೇವಿಯ ಸಮೀಪಕ್ಕೆ ಹೋಗಿ, ಈ ಯುದ್ಧ ವೃತ್ತಾಂತವನ್ನೆಲ್ಲವನ್ನೂ ತಿಳಿಸುವೆನು (ಎಂದು ಸ್ವಲ್ಪ ದೂರ ಹೋಗಿ ನೋಡಿ) ಇದೇ ಚಕ್ರತೀರ್ಥವು. ಇಲ್ಲಿ ಸಂಸಾರಸಮುದ್ರವನ್ನ

ದಾಟಿಸಿ, ಭಕ್ತರನ್ನು ಕಾಪಾಡುವ ಶ್ರೀಮನ್ನಾರಾಯಣನು ವಾಸಮಾಡು ತ್ತಿರುವನು. (ನಮಸ್ಕರಿಸಿ) ಇದೋ ವಿಷ್ಣುಭಕ್ತಿಯು ಇಲ್ಲಿಯೇ ಇರು ವಳು. ಮಹಾಮುನಿಗಳೆಲ್ಲರೂ ಇವಳನ್ನು ಉಪಾಸನೆ ಮಾಡುತ್ತಿರು ವರು. ಇವಳು ಶಾಂತಿಯೊಂದಿಗೇನೋ ಆಲೋಚಿಸುತ್ತಿರುವಳು.

(ವಿಷ್ಣುಭಕ್ತಿಯು ಶಾಂತಿಯೊಡನೆ ಪ್ರವೇಶಿಸುವಳು)

ಶಾಂತಿ—ದೇವಿಯೇ, ನಿನ್ನನ್ನು ನೋಡಿದರೆ ಬಹಳ ಚಿಂತಾಕ್ರಾಂತಳಾಗಿರುವಂತೆ ತೋರುತ್ತದೆ.

ವಿಷ್ಣುಭಕ್ತಿ—ವತ್ಸೆ, ಈ ಮಹಾ ಘೋರವಾದ ಯುದ್ಧದಲ್ಲಿ ಪ್ರಬಲನಾದ ಮಹಾಮೋಹನೊಂದಿಗೆ ಯುದ್ಧಕ್ಕೆ ನಿಂತಿರುವ ವತ್ಸನಾದ ವಿವೇಕನ ವೃತ್ತಾಂತವು ಏನಾಗಿರಬಹುದೆಂದು ನನ್ನ ಹೃದಯವು ವ್ಯಾಕುಲವಾಗಿದೆ.

ಶಾಂತಿ—ಈ ವಿಷಯದಲ್ಲಿ ಯೋಚನೆ ಮಾಡುವುದೇಕೆ ? ದೇವಿಯೇ, ನಿನ್ನ ಅನು ಗ್ರಹವು ಪೂರ್ಣವಾಗಿರುವಾಗ, ರಾಜನಾದ ವಿವೇಕನಿಗೆ ವಿಜಯದಲ್ಲಿ ಸಂದೇಹವಿಲ್ಲವೆಂದು ತಿಳಿಯುತ್ತೇನೆ.

ವಿಷ್ಣುಭಕ್ತಿ—ವತ್ಸೆ, ಪ್ರಾಯಕವಾಗಿ ಪ್ರಮಾಣಗಳಿಂದ ಭಾಗ್ಯೋತ್ಕರ್ಷವನ್ನು ನಿಶ್ಚಯಿಸಿಕೊಳ್ಳಬಹುದು. ಅದು ಸರಿಯೇ. ಆದರೂ ಪ್ರೇಮವು ಹೆಚ್ಚಾಗಿ ಇರುವ ವಸ್ತುವಿನಲ್ಲಿ ಮನಸ್ಸು ಅನರ್ಥವನ್ನೇ ಯೋಚಿಸುತ್ತದೆ. ಇದ ಲ್ಲದೆ ಶ್ರದ್ಧೆಯು ಬರುವುದು ಬಹಳ ಸಾವಕಾಶವಾಗಿರುವುದರಿಂದ ಮನ ಸ್ಸಿನಲ್ಲಿ ಸಂದೇಹವು ಇನ್ನೂ ಹೆಚ್ಚುತ್ತಲಿದೆ.

ಶ್ರದ್ಧೆ—(ಸಮಿಾಪಕ್ಕೆ ಬಂದು) ಭಗವತೀ ನಮಸ್ಕರಿಸುವೆನು.

ವಿಷ್ಣುಭಕ್ತಿ—ಶ್ರದ್ಧೆ, ಸುಖವಾಗಿ ಬಂದೆಯಾ ?

ಶ್ರದ್ಧೆ—ದೇವಿಯ ಅನುಗ್ರಹದಿಂದ.

ಶಾಂತಿ—ಜನನೀ, ನಮಸ್ಕರಿಸುತ್ತೇನೆ.

ಶ್ರದ್ಧೆ—ಮಗಳೇ, ನಿನಗೆ ಮಂಗಳವಾಗಲಿ.

ಶಾಂತಿ—(ಹಾಗೆಯೇ ನಮಸ್ಕರಿಸುವವಳು)

ಶ್ರದ್ಧೆ—ವತ್ಸೆ, ದೇವಿಯಾದ ವಿಷ್ಣುಭಕ್ತಿಯ ಅನುಗ್ರಹದಿಂದ ಋಷಿಜನಗಳ ಅಂತಃಕರಣ ಸ್ಥಾನವನ್ನು ಹೊಂದು.

ವಿಷ್ಣುಭಕ್ತಿ—ಶ್ರದ್ಧೆ, ಆಮೇಲೆ ಅಲ್ಲಿ ಏನು ನಡೆಯಿತು ?

ಶ್ರದ್ಧೆ—ದೇವಿಗೆ ಪ್ರತಿಕೂಲವನ್ನು ಆಚರಿಸುವರಿಗೆ ಆಗಬೇಕಾದ್ದೇ ಆಯಿತು.

ವಿಷ್ಣುಭಕ್ತಿ—ವಿಶದವಾಗಿ ಹೇಳು.

ಶ್ರದ್ಧೆ—ಕೇಳು, ಆದಿಕೇಶವನ ಮಂದಿರವನ್ನ ಬಿಟ್ಟು, ನೀನು ಬಂದ ನಂತರ, ಸೂರ್ಯೋದಯವಾದ ಒಂದೆರಡು ಘಳಿಗೆಗಳ ಮೇಲೆ ಅನೇಕ ವೀರರುಗಳು ಮಾಡಿದ ಸಿಂಹನಾದಗಳಿಂದಲೂ, ರಣವಾದ್ಯಗಳಿಂದಲೂ ದಿಗ್ಮಂಡಲವೆಲ್ಲವೂ ಕಿವುಡಾಗಿ ಹೋಯಿತು. ರಥದಲ್ಲಿ ಕಟ್ಟಿದ ಕುದುರೆಗಳ ಗೊರಸುಗಳ ಘಾತದಿಂದ ಧೂಳುಗಳು ಬಹಳವಾಗಿ ಭೂಮಿಯಿಂದೆದ್ದು, ಸೂರ್ಯನನ್ನು ಮುಚ್ಚಿಬಿಟ್ಟವು. ಆನೆಗಳೆಲ್ಲವೂ ಕಿವಿಯಾಡಿಸುವುದರಿಂದ ಎದ್ದ ಗಾಳಿಯು ಆ ಆನೆಗಳ ಕುಂಭಸ್ಥಳಗಳಲ್ಲಿದ್ದ ಕುಂಕುಮಗಳನ್ನು ಮೇಲಕ್ಕೆ ಹಾರಿಸಿ, ಹತ್ತು ದಿಕ್ಕುಗಳನ್ನೂ ಸಂಜೆಗೆಂಪುಗಳಿಂದ ಕೂಡಿದಂತೆ ಮಾಡಿದವು. ಸಮುದ್ರಗಳಂತಿರುವ ಅವರ ಸೈನ್ಯಗಳೂ, ನಮ್ಮ ಸೈನ್ಯಗಳೂ ಸಹ ಯುದ್ಧಕ್ಕೆ ಸಿದ್ಧಗಳಾದವು. ಆ ಸಮಯದಲ್ಲಿ ಮಹಾರಾಜನಾದ ವಿವೇಕನು ಮಹಾರಾಜ ಮಹಾಮೋಹನ ಸಭಾಪಕ್ಕೆ ನ್ಯೆಯ್ಯಾಯಿಕದರ್ಶನನೆಂಬ ದೂತನನ್ನು ಕಳುಹಿಸಿದನು. ಆ ದೂತನು ಮಹಾಮೋಹನ ಸಭಾಪಕ್ಕೆ ಹೋಗಿ, ಅವನನ್ನು ಕುರಿತು—“ಎಲೈ ಮಹಾಮೋಹನೇ, ವಿಷ್ಣುಮಂದಿರಗಳನ್ನೂ, ಪುಣ್ಯನದಿಗಳ ತೀರಪ್ರದೇಶಗಳನ್ನೂ, ಪವಿತ್ರಗಳಾದ ಅರಣ್ಯಗಳನ್ನೂ, ಸುಕೃತಶಾಲಿಗಳ ಮನಸ್ಸುಗಳನ್ನೂ ಪರಿತ್ಯಜಿಸಿ, ನಿನ್ನ ಸಹಚರರಾದ ಕಾಮಕ್ರೋಧಾದಿಗಳೊಂದಿಗೆ ಮ್ಲೇಚ್ಛ ದೇಶಗಳಿಗೆ ಹೊರಟು ಹೋಗಬೇಕು. ಇಲ್ಲವಾದರೆ ಕತ್ತಿಯಿಂದ ಕತ್ತರಿಸಲ್ಪಟ್ಟ ನಿನ್ನ ಪ್ರತಿಯೊಂದು ಅವಯವಗಳಿಂದಲೂ ಧಾರಾಸಂಪಾತವಾಗಿ ಸುರಿಯುವ ರಕ್ತವನ್ನು ಪಾನಮಾಡುವುದಕ್ಕೋಸ್ಕರ ನರಿಗಳು ಬಾಯ್ದೆರೆದುಕೊಂಡು ಸಿದ್ಧವಾಗಿವೆ” (ಎಂದು ತಿಳಿಸಿದನು)

ವಿಷ್ಣುಭಕ್ತಿ—ಆಮೇಲೆ, ಆಮೇಲೆ.

ಶ್ರದ್ಧೆ—ದೇವಿಯೇ, ಆಮೇಲೆ ಕೋಪದಿಂದ ಹುಬ್ಬನ್ನು ಗಂಟಿಕ್ಕಿ, ಮಹಾಮೋಹನು ಈ ದುರ್ವಿನಯಕ್ಕೆ ತಕ್ಕ ಫಲವನ್ನು ನೀಚನಾದ ವಿವೇಕನು ಅನುಭವಿ

ಸಲಿ ಎಂದು ಹೇಳಿ, ಪಾಷಂಡ, ತರ್ಕಶಾಸ್ತ್ರಗಳೊಂದಿಗೆ ಪಾಷಂಡ ಶಾಸ್ತ್ರವನ್ನು ಪ್ರಥಮದಲ್ಲಿ ಯುದ್ಧಕ್ಕೆ ಕಳುಹಿಸಿದನು. ಇಷ್ಟರೊಳಗೆ ನಮ್ಮ ಸೈನ್ಯದ ಮುಂಭಾಗದಲ್ಲಿ ಕೈಯ್ಯಲ್ಲಿ ಕಮಲವನ್ನು ಧರಿಸಿದ ಸರಸ್ವತಿಯು, ವೇದಗಳು, ಉಪವೇದಗಳು, ವೇದಾಂಗಗಳು, ಅಷ್ಟಾದಶ ಪುರಾಣಗಳು, ಮನ್ವಾದಿ ಧರ್ಮಶಾಸ್ತ್ರಗಳು, ಮಹಾಭಾರತಾದಿ ಇತಿಹಾಸಗಳು, ಪಾಂಚರಾತ್ರಾದ್ಯಾಗಮಗಳು, ಇವುಗಳಿಂದ ಸುತ್ತುವರಿಯಲ್ಪಟ್ಟವಳಾಗಿ ಅದ್ಭುತ ಕಾಂತಿಯಿಂದ ಆವಿರ್ಭವಿಸಿದಳು.

ವಿಷ್ಣುಭಕ್ತಿ—ಆಮೇಲೆ.

ಶ್ರದ್ಧೆ—ಆಮೇಲೆ ವೈಷ್ಣವ, ಶೈವ, ಸೌರಾದಿ ಆಗಮಗಳೆಲ್ಲವೂ ಸರಸ್ವತೀ ದೇವಿಯ ಸಮೀಪವನ್ನು ಹೊಂದಿದವು.

ವಿಷ್ಣುಭಕ್ತಿ—ಆಮೇಲೆ.

ಶ್ರದ್ಧೆ—ಅನಂತರದಲ್ಲಿ ಸಾಂಖ್ಯ, ನ್ಯಾಯ, ವೈಶೇಷಿಕ, ಮಹಾಭಾಷ್ಯ ಮೊದಲಾದ ಶಾಸ್ತ್ರಗಳಿಂದ ಕೂಡಿದ ಮೀಮಾಂಸೆಯು ಯುದ್ಧದಲ್ಲಿ ಉತ್ಸಾಹವುಳ್ಳವಳಾಗಿ, ಅಧಿಕರಣಗಳೆಂಬ ಸಾವಿರ ಭುಜಗಳಿಂದ ದಿಕ್ಕುಗಳೆಲ್ಲವನ್ನೂ ವ್ಯಾಪಿಸಿಕೊಂಡು ಎರಡನೇ ಕಾತ್ಯಾಯಿನಿಯಂತೆ ಮೂರು ವೇದಗಳನ್ನೇ ಮೂರು ಕಣ್ಣಾಗಿ ಉಳ್ಳವಳಾಗಿ ಸರಸ್ವತಿಯ ಮುಂದೆ ನಿಂತಳು.

ಶಾಂತಿ—ಸ್ವಭಾವವಿರುದ್ಧಗಳಾದ ಆಗಮಗಳೂ, ತರ್ಕಗಳೂ ಹೇಗೆ ಒಂದಾದವು?

ಶ್ರದ್ಧೆ—ಪುತ್ರಿಯೇ, ಒಂದೇ ವಂಶದಲ್ಲಿ ಹುಟ್ಟಿದವರು ಪರಸ್ಪರ ಅಂತಃಕಲಹವುಳ್ಳವರಾದಾಗ್ಯೂ, ಇತರರಿಂದ ತೊಂದರೆಯುಂಟಾದಾಗ, ಒಂದಾಗಿ ಸೇರಿ ಕೆಲಸ ಮಾಡುವರು. ಹಾಗೆ ಮಾಡುವುದೇ ಶೋಭಿಸುವುದು. ಹಾಗೆಯೇ ಇವುಗಳೂ ಕೂಡ ವೇದದಿಂದ ಹುಟ್ಟಿದವುಗಳಾದ ಕಾರಣ, ಅವಾಂತರ ವಿರೋಧಗಳಿದ್ದಾಗ್ಯೂ, ವೇದರಕ್ಷಣೆಗೋಸ್ಕರ ನಾಸ್ತಿಕ ಪಕ್ಷಗಳನ್ನು ನಿರಸನ ಮಾಡುವುದಕ್ಕಾಗಿ ಶಾಸ್ತ್ರಗಳೆಲ್ಲವೂ ಒಂದೇ ಆಗುವುವು. ವೇದಗಳ ವಿಷಯದಲ್ಲಿಯೋ ಅಂದರೆ, ಪದಾರ್ಥಗಳು ಭಿನ್ನಗಳಾದಾಗ್ಯೂ ಅದ್ವಿತೀಯ ಬ್ರಹ್ಮವೆಂಬ ಅಖಂಡ ವಾಕ್ಯಾರ್ಥವು ಒಂದೇ ಆಗಿರುವ ಕಾರಣ, ವಿರೋಧವೇ ಇಲ್ಲ. ನೋಡು, ಅನಂತವಾಗಿಯೂ, ಅದ್ವಿತೀಯವಾ

ಗಿಯೂ, ಜನ್ಮರಹಿತವಾಗಿಯೂ ಇರುವ ತೇಜೋರೂಪವಾದ ಬ್ರಹ್ಮವೊಂದನ್ನೇ ಸತ್ವರಜಸ್ತಮೋಗುಣಗಳ ಆಧಿಕ್ಯವನ್ನನುಸರಿಸಿ, ಅಚ್ಯುತನೆಂಬದಾಗಿಯೂ, ಬ್ರಹ್ಮನೆಂಬದಾಗಿಯೂ, ಉಮಾಪತಿಯೆಂಬದಾಗಿಯೂ ವೇದಗಳು ಹೇಳುತ್ತವೆ. ಹೀಗೆ ನಾನಾಮಾರ್ಗದಿಂದ ಹೊರಟ ಶ್ರುತಿಗಳೂ, ಉಪನಿಷತ್ತುಗಳೂ ಜಲಪ್ರವಾಹಗಳೆಲ್ಲವೂ ಸಮುದ್ರವನ್ನೇ ಸೇರುವಂತೆ ಆ ಜಗದೀಶ್ವರನೊಬ್ಬನನ್ನೇ ಸೇರುವುವು. ಆದ್ದರಿಂದಲೇ ಗೀತೆಯಲ್ಲಿ "ಯೇಪ್ಯನ್ಯದೇವತಾಭಕ್ತಾಃ ಯಜಂತೇ ಶ್ರದ್ಧಯಾನ್ವಿತಾಃ | ತೇಪಿಮಾಮೇವ ಕೌಂತೇಯ ಯಜಂತ್ಯವಿಧಿಪೂರ್ವಕಂ ||" ಎಂದು ಪರಮಾತ್ಮನು ಹೇಳಿರುವನು.

ವಿಷ್ಣುಭಕ್ತಿ—ಆಮೇಲೆ.

ಶ್ರದ್ಧೆ—ದೇವಿಯೇ, ಅನಂತರದಲ್ಲಿ ಅವರ ಸೈನ್ಯಕ್ಕೂ, ನಮ್ಮ ಸೈನ್ಯಕ್ಕೂ ಸಂಕುಲಯುದ್ಧವು ಪ್ರಾರಂಭವಾಯಿತು. ಸಂತತವಾಗಿ ಪ್ರಯೋಗಿಸುವ ಬಾಣಗಳ ಪರಂಪರೆಗಳಿಂದ ಆಕಾಶವು ಮುಚ್ಚಿಹೋಗಿ, ಮೇಘಾಚ್ಛಾದಿತವಾದಂತೆ ಸೂರ್ಯರಶ್ಮಿಯೇ ಗೋಚರವಾಗಲಿಲ್ಲ. ರಕ್ತಗಳು ನದಿಗಳ ಹಾಗೆ ಹರಿದವು. ಮಾಂಸಗಳು ಕೆಸರುಗಳಂತೆ ಕಾಣುತ್ತಿದ್ದವು. ದೊಡ್ಡ ದೊಡ್ಡದಾದ ಭೇದಿಸಲ್ಪಟ್ಟ ಕೆಳಗೆ ಬಿದ್ದಿರುವ ಆನೆಗಳು ನದಿಯ ಮಧ್ಯದಲ್ಲಿದ್ದ ಗುಡ್ಡದಂತಿದ್ದವು. ಮುರಿದುಹೋಗಿ ಬಿದ್ದಿರುವ ಶ್ವೇತಛತ್ರವೆಲ್ಲವೂ ಹಂಸಗಳಂತೆ ಕಾಣುತ್ತಿದ್ದವು. ಆ ಮಹಾ ಸಂಗ್ರಾಮದಲ್ಲಿ ನಾಸ್ತಿಕತಂತ್ರವು ಈ ಸೈನ್ಯದ ಪರಸ್ಪರ ತುಳಿದಾಟದಿಂದಲೇ ನಷ್ಟವಾಗಿ ಹೋಯಿತು. ಅನಂತರದಲ್ಲಿ ಪಾಷಂಡಾಗಮಗಳೆಲ್ಲವೂ ವೇದಮೂಲಕಗಳಾದ ಸದಾಗಮಗಳೆಂಬ ಸಮುದ್ರ ಪ್ರವಾಹದಿಂದ ದೂರವಾಗಿ ಎಸೆಯಲ್ಪಟ್ಟವು. ಅವುಗಳೊಳಗೆ ಕೆಲವು ಆಗಮಗಳು ಸಿಂಧು, ಗಾಂಧಾರ, ಮಗಧ, ಅಂಗ, ವಂಗ ಪಾರಸೀಕ, ಕಳಿಂಗಾದಿ ಮ್ಲೇಚ್ಛ ದೇಶಗಳಿಗೆ ಹೋಗಿ ಅವಿತುಕೊಂಡವು. ಪಾಷಂಡ, ಕಾಪಾಲಿಕಾದಿಗಳು ಪಾಂಚಾಲ, ಮಾಳವ, ಆಭೀರ, ಆವರ್ತ, ಮೊದಲಾದ ಸಮುದ್ರ ತೀರಪ್ರಾಂತ್ಯಗಳಲ್ಲಿ ಗುಪ್ತವಾಗಿ ಸಂಚರಿಸುತ್ತಿವೆ. ನ್ಯಾಯಶಾಸ್ತ್ರದಿಂದೊಡಗೂಡಿದ ಮೀಮಾಂಸೆಯ ಪೆಟ್ಟಿನಿಂದ ನಾಸ್ತಿಕತರ್ಕಗಳೆಲ್ಲವೂ ಜರ್ಝರೀಭೂತಗಳಾಗಿ ಆ ಆಗಮಗಳನ್ನೇ ಅನುಸರಿಸಿ ಓಡಿಹೋದವು.

ವಿಷ್ಣುಭಕ್ತಿ—ಆಮೇಲೆ.

ಶ್ರದ್ಧೆ—ಅನಂತರದಲ್ಲಿ ವಸ್ತುವಿಚಾರನಿಂದ ಕಾಮನು ಹತನಾದನು. ಕ್ಷಮೆಯು ಕ್ರೋಧ, ಪಾರುಷ್ಯ, ಹಿಂಸೆ, ಮೊದಲಾದವರನ್ನು ಸಂಹರಿಸಿದಳು. ಸಂತೋಷನು ಲೋಭ, ತೃಷ್ಣೆ, ದೈನ್ಯ, ಅನೃತವಾದ, ಪೈಶುನ್ಯ, ಸ್ತೇಯ, ಪರಿಗ್ರಹ, ಇವರುಗಳೆಲ್ಲರನ್ನೂ ನಿಗ್ರಹಿಸಿದನು. ಅನಸೂಯೆಗೆ ಮಾತ್ಸರ್ಯನು ಸೋತನು. ಪರೋತ್ಕರ್ಷ ಸಂಭಾವನೆಯು ಮದನನ್ನು ಧ್ವಂಸ ಮಾಡಿದಳು. ಪರಗುಣಾಧಿಕ್ಯನು ಮಾನನ್ನು ಖಂಡಿಸಿದನು.

ವಿಷ್ಣುಭಕ್ತಿ—(ಬಹಳ ಸಂತೋಷದಿಂದ) ಸಾಧುವೇ ಆಯಿತು. ಮಹಾಮೋಹನ ಸಮಾಚಾರವೇನು ?

ಶ್ರದ್ಧೆ—ದೇವಿಯೇ, ಮಹಾಮೋಹನೂ ಕೂಡ ಯೋಗವಿಘ್ನಗಳೊಂದಿಗೆ ಎಲ್ಲಿಯೋ ಅವಿತುಕೊಂಡಿರುವನು. ಎಲ್ಲಿ ಅವಿತುಕೊಂಡಿದಾನೆ ಎಂಬುದು ಗೊತ್ತಾಗುವುದಿಲ್ಲ.

ವಿಷ್ಣುಭಕ್ತಿ—ಹಾಗಾದರೆ ದೊಡ್ಡದಾದ ಅನರ್ಥ ಶೇಷವು ಇನ್ನೂ ಇದೆ. ಅದು ಮೊದಲು ಪರಿಹರಿಸಲ್ಪಡಬೇಕು. ಏಕೆಂದರೆ, ನಿಶ್ಚಲವಾದ ಸಂಪತ್ತನ್ನು ಅಪೇಕ್ಷಿಸುವ ವಿದ್ವಾಂಸನು ಅಗ್ನಿಶೇಷವನ್ನೂ, ಋಣಶೇಷವನ್ನೂ, ಶತ್ರುಶೇಷವನ್ನೂ ಉಳಿಸಬಾರದು. ಮನಸ್ಸಿನ ವೃತ್ತಾಂತವೇನು ?

ಶ್ರದ್ಧೆ—ದೇವಿ, ಅವನೂ ಕೂಡ ಪುತ್ರಪೌತ್ರಾದಿ ವ್ಯಸನಗಳಿಂದ ಉಂಟಾದ ಶೋಕಾವೇಗವನ್ನು ಸಹಿಸಲಾರದೆ ಪ್ರಾಣತ್ಯಾಗವನ್ನು ಮಾಡುವುದಕ್ಕೆ ನಿಶ್ಚಯಿಸಿರುವನು.

ವಿಷ್ಣುಭಕ್ತಿ—(ನಕ್ಕು) ಹಾಗಾದರೆ ನಾವೆಲ್ಲರೂ ಕೃತಾರ್ಥರಾದೆವು. ಜೀವಾತ್ಮನಿಗೂ ಕೂಡ ಪರಮಸುಖ ಉಂಟಾಗುತ್ತೆ. ಆದರೆ ಆ ದುರಾತ್ಮನು ಹೇಗೆ ಪ್ರಾಣವನ್ನು ಬಿಡುವನು ?

ಶ್ರದ್ಧೆ—ದೇವಿಯಾದ ನೀನು ಪ್ರಬೋಧೋದಯಕ್ಕೋಸ್ಕರ ಹೀಗೆ ಸಂಕಲ್ಪ ಮಾಡಿರುವುದರಿಂದ ಶರೀರದೊಂದಿಗೇನೇ ಅವನು ಶೀಘ್ರವಾಗಿ ಉಳಿಯುವುದಿಲ್ಲ.

ವಿಷ್ಣುಭಕ್ತಿ—ಅದಿರಲಿ. ಆ ಮನಸ್ಸಿಗೆ ವೈರಾಗ್ಯ ಹುಟ್ಟುವುದಕ್ಕಾಗಿ ವೈಯಾಸಕಿಯಾದ ಸರಸ್ವತಿಯನ್ನು ಕಳುಹಿಸೋಣ (ಎಂದು ಹೊರಟು ಹೋಗುವಳು)

(ಸಂಕಲ್ಪನೂ, ಮನಸ್ಸೂ ಪ್ರವೇಶಿಸುವರು.)

ಮನಸ್ಸು—(ಕಣ್ಣೀರು ಬಿಡುತ್ತಾ) ಹಾ ಮಕ್ಕಳುಗಳಿರಾ ! ಎಲ್ಲಿ ಹೋಗಿದ್ದೀರಿ? ನನ್ನೊಂದಿಗೆ ಮಾತನಾಡಿರಿ. ಎಲೈ ಕುಮಾರನಾದ ರಾಗನೇ, ದ್ವೇಷನೇ, ಮದನೇ, ಮಾನನೇ, ಮಾತ್ಸರ್ಯನೇ ನನ್ನನ್ನು ಬಂದು ಆಲಿಂಗಿಸಿಕೊಳ್ಳಿರಿ. ನನ್ನ ಅವಯವಗಳೆಲ್ಲವೂ ಕ್ಲೇಶಪಡುವುದಿಲ್ಲವೇ ? ಅಯ್ಯೋ ! ಅನಾಥನೂ, ಮುದುಕನೂ ಆದ ನನ್ನನ್ನು ಸಂಭಾವಿಸುವುದಿಲ್ಲವಲ್ಲಾ ! ಅಸೂಯೆಯೇ ಮೊದಲಾದ ಪುತ್ರಿಯರು ಎಲ್ಲಿ ಹೋದರೋ ? ಆಶೆ, ಹಿಂಸೆ, ತೃಷ್ಣೆ ಮೊದಲಾದ ಸೊಸೆಯರಾದರೂ ಕಾಣುವುದೇ ಇಲ್ಲವಲ್ಲಾ ! ಮಂದಭಾಗ್ಯನಾದ ನನಗೆ ಎಲ್ಲರೂ ಒಟ್ಟಿಗೆ ದುರ್ದೈವದಿಂದ ಇಲ್ಲವಾದರೆ ! ನನಗೆ ಯಾರು ಗತಿ ! (ದೈನ್ಯದಿಂದ) ಅಯ್ಯೋ ! ದುಃಖಸಂತಾಪವು ವಿಷದಂತೆಯೂ, ಬೆಂಕಿಯಂತೆಯೂ ಹಬ್ಬುತ್ತಿರುವುದಲ್ಲಾ ! ದೇಹವೆಲ್ಲವೂ ಸುಟ್ಟುಹೋಗುತ್ತಿದೆ. ಮಹಾ ಸಂಕಟವನ್ನುಂಟುಮಾಡುತ್ತಲಿದೆ. ಸರ್ವ ಅವಯವಗಳನ್ನೂ ಕತ್ತರಿಸುತ್ತಲಿದೆ. ವಿವೇಕವನ್ನು ನಾಶಮಾಡುತ್ತಲಿದೆ. ಬುದ್ಧಿಭ್ರಂಶ ಉಂಟಾಗುತ್ತಲಿದೆ. ಅಯ್ಯೋ ! ಬಲಾತ್ಕಾರವಾಗಿ ನನ್ನ ಪ್ರಾಣ ಹೋಗುತ್ತಲಿದೆಯಲ್ಲಾ ! (ಎಂದು ಮೂರ್ಛಿತನಾಗುವನು)

ಸಂಕಲ್ಪ—ರಾಜನೇ, ಸಮಾಧಾನ ಹೊಂದು, ಸಮಾಧಾನ ಹೊಂದು.

ಮನಸ್ಸು—(ಚೇತರಿಸಿಕೊಂಡು) ದೇವಿಯಾದ ಪ್ರವೃತ್ತಿಯಾದರೂ ಈ ದುರವಸ್ಥೆಯಲ್ಲಿರುವ ನನ್ನನ್ನು ಸಮಾಧಾನ ಪಡಿಸಬಾರದೇ ?

ಸಂಕಲ್ಪ—(ಕಣ್ಣೀರು ಸುರಿಸುತ್ತಾ) ಪ್ರವೃತ್ತಿದೇವಿಯು ಇನ್ನೂ ಇರುವಳೇ ? ಕುಟುಂಬ ವ್ಯಸನವನ್ನು ಕೇಳಿದ ವಡನೆಯೇ ದುಃಖಾಗ್ನಿಯಿಂದ ದಗ್ಧಳಾಗಿ ಎದೆಯೊಡೆದು ನಾಶವಾಗಿ ಹೋದಳು.

ಮನಸ್ಸು—ಹಾ ಪ್ರಿಯೆ, ಎಲ್ಲಿರುವಿ ? ನಿನ್ನ ಪ್ರಿಯವಾದ ಪ್ರತಿವಚನವನ್ನು ನನಗೆ ಕೊಡು. ಪ್ರಿಯಳೇ, ನಿನಗೆ ನಾನಿಲ್ಲದೆ ಸ್ವಪ್ನದಲ್ಲಿಯೂ ಸಂತೋಷವಿಲ್ಲವಲ್ಲಾ ! ನೀನಿಲ್ಲದೆ ನಾನು ಸಾಯುವೆನಲ್ಲಾ ! ಅಂಥಾ ನೀನು ದೈವದುರ್ವಿಪಾಕದಿಂದ ನನ್ನನ್ನು ಬಿಟ್ಟು ದೂರವಾಗಿ ಹೋದೆ. ಅಯ್ಯೋ ! ನಾನು ಇನ್ನೂ ಬದುಕಿರುವೆನು. ಪ್ರಾಣಗಳು ಜಾಗ್ರತೆಯಾಗಿ ಹೋಗಲಾರವು. (ಪುನಃ ಮೂರ್ಛಿತನಾಗುವನು.)

ಸಂಕಲ್ಪ—ರಾಜನೇ, ಸಮಾಧಾನ ಹೊಂದು, ಸಮಾಧಾನ ಹೊಂದು.

ಮನಸ್ಸು—(ಸಮಾಧಾನವನ್ನು ಹೊಂದಿದವನಾಗಿ) ಇನ್ನು ಸಾಕು ನನ್ನ ಬದುಕು. ಸಂಕಲ್ಪನೇ, ಚಿತೆಯನ್ನು ಮಾಡು. ಆ ಬೆಂಕಿಯಲ್ಲಿ ಬಿದ್ದು ಈ ಬೆಂಕಿಯ ನ್ನಾರಿಸಿಕೊಳ್ಳುವೆನು (ಎಂದು ಸನ್ನಾಹ ಮಾಡುವನು.)

(ಸರಸಸ್ವತಿಯು ಪ್ರವೇಶಿಸುವಳು.)

ಸರಸ್ವತಿ—ಪುತ್ರವ್ಯಸನದಿಂದ ಖಿನ್ನನಾದ ಮನಸ್ಸಿಗೆ ಪ್ರಬೋಧವನ್ನುಂಟುಮಾಡು ಎಂದು ಭಗವತಿಯಾದ ವಿಷ್ಣುಭಕ್ತಿಯು ನನ್ನನ್ನು ಕಳುಹಿಸಿರುವಳು. ಹಾಗೆಯೇ ಅವನಿಗೆ ವೈರಾಗ್ಯವು ಉಂಟಾಗುವಂತೆ ಪ್ರಯತ್ನಿಸು ಎಂತಲೂ ಹೇಳಿರುವಳು. ಆಗಲಿ, ಮನಸ್ಸಿನ ಸಮೀಪಕ್ಕೆ ಹೋಗುತ್ತೇನೆ (ಎಂದು ಬಂದು) ವತ್ಸನೇ, ಏನು ಹೀಗೆ ಕಾತುರನಾಗಿರುತ್ತೀಯೆ ? ಯಾವುದು ಶಾಶ್ವತ ! ಎಲ್ಲವೂ ಅನಿತ್ಯಗಳೆಂಬ ಅಂಶವು ನಿನಗೆ ತಿಳಿದೇ ಇದೆಯಲ್ಲವೇ? ಐತಿಹಾಸಿಕಗಳಾದ ಅನೇಕ ಉಪಾಖ್ಯಾನಗಳನ್ನು ನೀನು ಓದಿದ್ದೀಯೆ, ನೋಡು. ಕಲ್ಪದವರೆಗೂ ಜೀವಿಸುವ ಚತುರ್ಮುಖ ಬ್ರಹ್ಮರುಗಳೂ, ದೀರ್ಘಜೀವಿಗಳಾದ ಇಂದ್ರನೇ ಮೊದಲಾದ ದೇವತೆಗಳೂ, ರಾಕ್ಷಸರುಗಳೂ, ಮನು ಮೊದಲಾದವರೂ, ಮಹಾ ಮಹಾ ಋಷಿಗಳೂ, ಈ ಭೂಮಿಯೂ, ಸಮುದ್ರಗಳೂ, ಕೋಟಿ ಸಲ ಹುಟ್ಟಿ ನಷ್ಟವಾಗಿವೆ. ಹೀಗಿರುವಾಗ ಅಲ್ಪಾಯುಷ್ಯವುಳ್ಳವರ ನಾಶಕ್ಕೆ ಅಳುವುದೇಕೆ ? ಇದು ಏನು ಮೋಹ ! ಏಕೆ ಇಷ್ಟು ಹೆಚ್ಚುವುದು ? ಈ ಪಾಂಚಭೌತಿಕ ಶರೀರವು ನದಿಯಲ್ಲಿರುವ ನೊರೆಯಂತೆ ಕ್ಷಣಿಕವಾಗಿ ನಷ್ಟವಾದರೆ, ಇದಕ್ಕೆ ದುಃಖ ಪಡುವುದು ಆಶ್ಚರ್ಯವೇ ಸರಿ. ಆದ್ದರಿಂದ ಪದಾರ್ಥಗಳೆಲ್ಲವೂ ಅನಿತ್ಯಗಳೆಂದು ಭಾವಿಸು. ಬ್ರಹ್ಮವೊಂದೇ ನಿತ್ಯವಾದದ್ದು. ಇತರ ವಸ್ತುಗಳೆಲ್ಲವೂ ಅನಿತ್ಯಗಳು ಎಂದು ತಿಳಿದವನನ್ನು ದುಃಖವು ಬಾಧಿಸುವುದಿಲ್ಲ. ಏಕೆಂದರೆ ಬ್ರಹ್ಮವೊಂದೇ ನಿಜವಾಗಿ, ಸರ್ವವೂ ವಿಕಲ್ಪಿತವಾಗಿ, ಶಾಶ್ವತವಾಗಿ ನಿಲ್ಲುವ ಬ್ರಹ್ಮೈಕತ್ವದ ಪರಮಾರ್ಥವನ್ನು ತಿಳಿದುಕೊಂಡಾಗ, ಮೋಹವಾಗಲೀ, ಶೋಕವಾಗಲೀ ಎಲ್ಲಿರುವುದು ?

ಮನಸ್ಸು—ಪೂಜ್ಯಳೇ, ದುಃಖದಿಂದ ತುಂಬಿಹೋಗಿರುವ ಈ ಮನಸ್ಸಿನಲ್ಲಿ ವಿವೇಕಕ್ಕೆ ಅವಕಾಶವೇ ದೊರಕುವುದಿಲ್ಲ.

ಸರಸ್ವತಿ—ವತ್ಸ, ಇದು ಸ್ನೇಹದ ದೋಷ. ಏಕೆಂದರೆ ಎಲ್ಲಾ ಅನರ್ಥವನ್ನೂ ಸ್ನೇಹವು ಉಂಟುಮಾಡುವುದೆಂದು ಪ್ರಸಿದ್ಧವಾಗಿದ್ದೇ ಇದೆ. ನೋಡು, ಮನುಷ್ಯರುಗಳು 'ಪ್ರಿಯ' ಎಂಬ ಹೆಸರುಳ್ಳ ಕ್ಲೇಶವೆಂಬ ಬೀಜವನ್ನು ಬಿತ್ತುತ್ತಾರೆ. ಆ ಬೀಜದಿಂದ ಹುಟ್ಟುವ ಮೊಳಕೆಯು ವಜ್ರಾಗ್ನಿಯ ನ್ನೊಳಕೊಂಡಿರುತ್ತದೆ. ಇದಕ್ಕೆ ಸ್ನೇಹವೆಂದು ಹೆಸರು. ಈ ಮೊಳಕೆ ಯಿಂದ ಹುಟ್ಟುವ ಮರಗಳೇ ಶೋಕಗಳು. ಆ ಶೋಕಗಳು ಸಾವಿರಾರು ಕೊಂಬೆಗಳುಳ್ಳದ್ದಾಗಿ ತುಷಾಗ್ನಿಯಂತೆ ತೀಕ್ಷ್ಣವಾದವುಗಳಾಗಿ ಮೆಲ್ಲ ಮೆಲ್ಲಗೆ ದೇಹವನ್ನು ಸುಡುತ್ತಾ ಬರುತ್ತವೆ.

ಮನಸ್ಸು—ದೇವಿಯೇ, ನೀನು ಹೇಳುವುದು ನಿಜ. ಆದರೂ ಶೋಕಾನಲದಗ್ಧ ನಾದ ನಾನು ಜೀವಿಸಲಾರೆನು. ಈ ಕೊನೆಗಾಲದಲ್ಲಿ ನಿನ್ನನ್ನು ನೋಡಿದ್ದು ಬಹಳ ಒಳ್ಳೆಯದಾಯಿತು.

ಸರಸ್ವತಿ—ಹೀಗೆ ಆತ್ಮಹತ್ಯೆಯಲ್ಲಿ ಪ್ರವರ್ತಿಸುವುದು ಬಹಳ ಕೆಟ್ಟದ್ದು. ಮತ್ತು ಈ ಪುತ್ರಾದಿಗಳು ಸದಾ ದುಃಖವನ್ನು ಕೊಡತಕ್ಕವರಾದ ಕಾರಣ, ಅಪ ಕಾರಿಗಳೇ ಹೊರತು ಉಪಕಾರಿಗಳಲ್ಲ. ಇವರುಗಳಿಗೋಸ್ಕರ ಪ್ರಾಣ ತ್ಯಾಗದಲ್ಲಿ ಪ್ರಯತ್ನಿಸುವುದು ಉಚಿತವೇ ? ನೋಡು, ಈ ಪುತ್ರಕಳತ್ರಾದಿ ಗಳು ಮುಂದೇನಾದರೂ ಉಪಕಾರ ಮಾಡತಕ್ಕವರೇ ? ಹಿಂದೆ ಏನಾ ದರೂ ಮಾಡಿದ್ದಾರೆಯೇ ? ಕಾಲತ್ರಯದಲ್ಲಿಯೂ ಉಪಕಾರ ಮಾಡುವು ದಿಲ್ಲ. ಆದ್ದರಿಂದ ಮನುಷ್ಯರಿಗೆ ಪರಿಗ್ರಹಗಳು ಸುಖಕರಗಳಲ್ಲ. ಇದ ಲ್ಲದೆ ಅವರ ವಿಯೋಗ ಉಂಟಾದರೆ, ಮರ್ಮವನ್ನು ಕತ್ತರಿಸುವಷ್ಟು ವ್ಯಥೆಯುಂಟಾಗುತ್ತದೆ. ಹೀಗಿದ್ದರೂ ಪ್ರಾಣಿಗಳು ಆ ಪುತ್ರಾದಿಗಳಿ ಗೋಸ್ಕರ ಹೇಳಕೂಡದಷ್ಟು ಆಯಾಸವನ್ನು ಹೊಂದಿ ವ್ಯರ್ಥವಾಗಿ ಕಷ್ಟಪ ಡುವರಲ್ಲಾ ! ಆಶ್ಚರ್ಯ ! ಮತ್ತು ಈ ಪಾಪಿಗಳಿಂದ ಎಷ್ಟು ಕಷ್ಟವನ್ನು ನೀನು ಪಟ್ಟಿಲ್ಲ ! ಇವರುಗಳಿಗೋಸ್ಕರ ಪೂರ್ಣ ಪ್ರವಾಹದಿಂದ ಹರಿ ಯುವ ಎಷ್ಟೋ ನದಿಗಳನ್ನು ನೀನು ದಾಟಲಿಲ್ಲವೇ ? ಇವರಿಗೋಸ್ಕರ ನೀನು ಎಷ್ಟು ಬೆಟ್ಟಗಳಲ್ಲಿ ಅಲೆಯಲಿಲ್ಲಾ ! ಕ್ರೂರಮೃಗಗಳ ಸಂಚಾರ ದಿಂದ ಘೋರವಾದ ಕಾಡುಗಳಲ್ಲಿ ಇವರು ನಿನ್ನನ್ನು ಅಲೆಯುವಂತೆ ಮಾಡ

ಲಿಲ್ಲಾ ! ಧನದ ಕೊಬ್ಬಿನಿಂದ ಕೂಡಿದ ದುಷ್ಟ ಪ್ರಭುಗಳನ್ನು ನೋಡಬೇಕಾದ ಪರಮ ಕಷ್ಟವಾದ ಕೆಲಸಗಳನ್ನೂ ಕೂಡ ನಿನ್ನಿಂದ ಮಾಡಿಸಲಿಲ್ಲವೇ?

ಮನಸ್ಸು—ದೇವಿ, ಇದೆಲ್ಲವೂ ನಿಜ. ಆದರೂ ನಮ್ಮಲ್ಲೇ ಹುಟ್ಟಿ, ಬಾಲ್ಯದಿಂದಲೂ ನಮ್ಮಿಂದ ಲಾಲಿಸಲ್ಪಟ್ಟವರಾದ ಕಾರಣ ಯಾವಾಗ್ಯೂ ಮನಸ್ಸಿನಲ್ಲಿಯೇ ಕಟ್ಟಿದಂತೆ ಕಾಣುತ್ತಿರುವ ಅವರುಗಳ ನಾಶವು ಪ್ರಾಣವೇ ಹೋದಂತಾಗಿದೆ. ಈ ವ್ಯಥೆಯು ಮರ್ಮಚ್ಛೇದಕ್ಕಿಂತಲೂ ಬಹು ಕ್ರೂರವಾಗಿದೆ.

ಸರಸ್ವತಿ—ವತ್ಸ, ಈ ವ್ಯಾಮೋಹವು ಮಮತಾವಾಸನೆಯಿಂದ ಹುಟ್ಟಿದ್ದು ನೋಡು. ಮನೆಯಲ್ಲಿ ಸಾಕಿದ ಕೋಳಿಯನ್ನು ಬೆಕ್ಕು ಹಿಡಿದು ತಿಂದರೆ ದುಃಖವಾಗುತ್ತದೆ. ಅದೇ ಬೆಕ್ಕು ಒಂದು ಗುಬ್ಬಚ್ಚಿಯನ್ನಾಗಲೀ, ಇಲಿಯನ್ನಾಗಲೀ ಹಿಡಿದು ತಿಂದರೆ ಅಷ್ಟು ದುಃಖವಾಗುವುದಿಲ್ಲ. ಕಾರಣವೇನು ? ಇಲಿಯಲ್ಲಿಯೂ, ಗುಬ್ಬಚ್ಚಿಯಲ್ಲಿಯೂ ಮಮತೆ ಇಲ್ಲದ್ದರಿಂದ ದುಃಖವಾಗಲಿಲ್ಲ. ಕೋಳಿಯಲ್ಲಿ ಮಮತೆ ಇದ್ದದ್ದರಿಂದ ದುಃಖ ಉಂಟಾಯಿತು. ಆದ್ದರಿಂದ ಮಮತೆಯನ್ನು ಬಿಡು ನೋಡು. ಶರೀರದಲ್ಲಿ ಎಷ್ಟು ಹುಳುಗಳು ಹುಟ್ಟುವುದಿಲ್ಲ ? ಅವುಗಳನ್ನ ಪ್ರಯತ್ನಪುರಸ್ಸರವಾಗಿ ಶರೀರದಿಂದ ತೆಗೆದು ಹೊರಗೆ ಎಸೆಯುತ್ತಾರೆ. ಅದೇ ರೀತಿಯಲ್ಲಿ ಹುಟ್ಟಿದ ಈ ಹುಳುವಿಗೆ ಮಗನೆಂದು ಹೆಸರಿಟ್ಟು ತಮ್ಮ ದೇಹವನ್ನ ಬಳಲಿಸಿಕೊಳ್ಳುತ್ತಾರೆ. ಇದೆಂತಹ ಮೋಹ ?

ಮನಸ್ಸು—ದೇವಿ, ಇದು ಹೀಗೆಯೇ ಸರಿ. ಈ ಮಮತ್ವ ಗ್ರಂಥಿಯನ್ನು ಕಿತ್ತು ಹಾಕುವುದು ಬಹಳ ಕಷ್ಟ. ಚನ್ನಾಗಿ ಹೊಸೆದ ಹಗ್ಗದಂತೆ ಸ್ನೇಹವೆಂಬ ಅನೇಕ ಸೂತ್ರಗಳನ್ನು ಸೇರಿಸಿ, ನಿರಂತರಾಭ್ಯಾಸದಿಂದ ದೃಢಪಡಿಸಲ್ಪಟ್ಟ ಈ ಮಮತ್ವವು ಕೀಳುವುದಕ್ಕಾಗದೆ ಇದೆ. ಇದರ ಮೋಕ್ಷಕ್ಕೆ ಉಪಾಯವೇನಾದರೂ ನಿನಗೆ ತಿಳಿದಿದೆಯೇ ?

ಸರಸ್ವತಿ—ವತ್ಸ, ಪದಾರ್ಥಗಳು ಅನಿತ್ಯಗಳೆಂದು ಭಾವಿಸುವುದೇ ಮಮತೆಯ ನಾಶಕ್ಕೆ ಮೊದಲನೆ ಉಪಾಯವು ನೋಡು. ಬಹಳ ವಿಶಾಲವಾದ ಈ ಸಂಸಾರದಲ್ಲಿ ಎಷ್ಟು ಜನ್ಮಗಳು ಕಳೆದವು. ಪ್ರತಿ ಒಂದು ಜನ್ಮದಲ್ಲಿಯೂ

ತಂದೆ, ತಾಯಿ, ಪತ್ನಿ, ಪುತ್ರರು, ತಾತ ಮೊದಲಾದವರು ಎಷ್ಟು ಜನವಾದರು ? ಇದನ್ನ ಗಣಿಸುವುದಾದರೆ ಒಂದು ಕೋಟಿ ತಂದೆ-ತಾಯಿಯೇ ಮೊದಲಾದವರುಗಳು ಕಳೆದುಹೋಗಲಿಲ್ಲವೇ ? ಆದ್ದರಿಂದ ಮಿಂಚಿನಂತೆ ಕ್ಷಣಿಕಗಳೆಂದು ಈ ಬಂಧುಸಮಾಗಮುಗಳನ್ನು ಅಡಿಗಡಿಗೂ ಯೋಚಿಸಿ, ಹೃದಯದಲ್ಲಿ ನಿರ್ಧರಿಸಿಕೊಂಡು ಸುಖಿಯಾಗು.

ಮನಸ್ಸು—ಪೂಜ್ಯಳೇ, ನಿನ್ನ ಅನುಗ್ರಹದಿಂದ ನನ್ನ ವ್ಯಾಮೋಹವೆಲ್ಲವೂ ತೊಲಗಿ ಹೋಯಿತು. ಆದರೆ, ನಿನ್ನ ಮುಖಚಂದ್ರದಿಂದ ಸುರಿದ ಉಪದೇಶಾಮೃತಗಳಿಂದ ನನ್ನ ಹೃದಯವು ತೊಳೆದು ಶುದ್ಧಿಮಾಡಲ್ಪಟ್ಟಾಗ್ಯೂ, ಶೋಕಪರಂಪರೆಗಳಿಂದ ಪುನಃ ಮಲಿನವಾಗಿಯೇ ಆಗುತ್ತಾ ಇದೆ. ಆದಕಾರಣ ಇನ್ನೂ ಹಸಿಯಾಗಿರುವ ಶೋಕದ ಪೆಟ್ಟಿಗೆ ಔಷಧವೇನೆಂಬುವುದನ್ನು ಅಪ್ಪಣೆ ಕೊಡಿಸು.

ಸರಸ್ವತಿ—ವತ್ಸನೇ, ಈ ವಿಷಯದಲ್ಲಿ ಋಷಿಗಳು ಉಪದೇಶ ಮಾಡಿಯೇ ಇರುವರು. ಬಾಣಪ್ರಹಾರವಿಲ್ಲದೆಯೇ ಮರ್ಮವನ್ನು ಭೇದಿಸುವ ಅಧಿಕವಾದ ಶೋಕದ ಪೆಟ್ಟುಗಳು ಆರ್ದ್ರವಾಗಿರುವಾಗ, ಚಿಂತೆಯಿಲ್ಲದೆ ಇರುವುದೇ ಮಹೌಷಧಿಯು.

ಮನಸ್ಸು—ಪೂಜ್ಯಳೇ, ಇದು ಹೀಗೆಯೇ ಸರಿ. ಆದರೆ ಹೃದಯವನ್ನು ತಡೆದು ನಿಲ್ಲಿಸುವುದು ಕಷ್ಟವಾಗಿದೆ. ಏಕೆಂದರೆ ಚಂದ್ರನ ಬಿಂಬವು ಗಾಳಿಯಿಂದ ಬಂದು ಕವಿಯುವ ಮೇಘಖಂಡಗಳಲ್ಲಿ ಒಂದರಿಂದ ಹೊರಟರೆ ಇನ್ನೊಂದು ಬಂದು ಆವರಿಸಿಕೊಳ್ಳುವಂತೆ ಚಿಂತೆಯ ಸಮೂಹಗಳೂ ಕೂಡ ಒಂದರ ಮೇಲೊಂದರಂತೆ ಕವಿಯುತ್ತಲಿದೆ.

ಸರಸ್ವತಿ—ವತ್ಸ, ಇದು ಹೃದಯದ ವಿಕಾರವು, ಆದ್ದರಿಂದ ಈ ಹೃದಯವನ್ನ ಯಾವುದಾದರೂ ಒಂದು ಶಾಂತವಾದ ವಸ್ತುವಿನಲ್ಲಿ ಇರಿಸು.

ಮನಸ್ಸು—ಪೂಜ್ಯಳೇ, ಪ್ರಸನ್ನಳಾಗಿ ಶಾಂತವಾದ ವಿಷಯವನ್ನು ತಿಳಿಸು.

ಸರಸ್ವತಿ—ವತ್ಸನೇ, ಇದು ಬಹಳ ರಹಸ್ಯವಾದದ್ದು. ಆದರೂ ಆರ್ತರುಗಳಿಗೆ ಉಪದೇಶ ಮಾಡುವುದೇನೂ ದೋಷವಲ್ಲ. ಮೇಘಶ್ಯಾಮನಾಗಿಯೂ, ಹಾರಕೇಯೂರ ಕುಂಡಲ ಕಿರೀಟಗಳನ್ನು ಧರಿಸಿದವನಾಗಿಯೂ ಇರುವ

ಪರಿಯನ್ನಾಗಲೀ ಶಾರ್ದೂಲ ಚರ್ಮವನ್ನೂ, ಶಶಿಖಂಡವನ್ನೂ ಧರಿಸಿರುವ ಹರನನ್ನಾಗಲೀ ಪ್ರತಿನಿತ್ಯವೂ ಸ್ಮರಿಸುತ್ತಾ, ಬೇಸಿಗೆಯಲ್ಲಿ ತಣ್ಣಗಿರುವ ಮಡುವನ್ನು ಹೊಕ್ಕು ಸುಖಪಡುವಂತೆ ಶೋಕರಹಿತನಾಗಿ, ಪರಬ್ರಹ್ಮ ನನ್ನು ಹೊಂದಿ ಸುಖಪಡು.

ಮನಸ್ಸು—(ಆಲೋಚಿಸಿ) ಸರ್ವ ಪ್ರಕಾರದಿಂದಲೂ ಪೂಜ್ಯಳಾದ ನೀನು ನನ್ನನ್ನು ಕಾಪಾಡಿದೆ (ಎಂದು ನಮಸ್ಕರಿಸುವನು)

ಸರಸ್ವತಿ—ವತ್ಸನೇ, ಈಗ ನಿನ್ನ ಹೃದಯವು ಉಪದೇಶಕ್ಕೆ ಯೋಗ್ಯವಾಗಿದೆ. ಆದ್ದರಿಂದ ಮತ್ತೊಂದು ಉಪದೇಶ ಮಾಡುವೆನು. ಮೂಢಬುದ್ಧಿಯು ಳ್ಳವರು ಮಗನಾಗಲೀ, ತಂದೆಯಾಗಲೀ, ಸ್ನೇಹಿತನಾಗಲೀ ಮರಣವನ್ನು ಹೊಂದಿದ್ದೇ ಆದರೆ ದುಃಖದಿಂದ ಎದೆಯನ್ನು ಹೊಡೆದುಕೊಳ್ಳುತ್ತಾ ಸಂಕಟ ಪಡುತ್ತಾರೆ. ನಿಸ್ಸಾರವಾಗಿಯೂ, ಪರಿಣಾಮದಲ್ಲಿ ವಿರಸವಾ ಗಿಯೂ ಇರುವ ಈ ಸಂಸಾರದಲ್ಲಿ ಇಂತಹ ವಿಯೋಗ ಉಂಟಾದಾಗ, ತಿಳಿ ದವರಿಗೆ ಪರಮಶಾಂತಿಯನ್ನುಂಟುಮಾಡುವ ವೈರಾಗ್ಯವು ದೃಢಪಡುತ್ತದೆ.

(ವೈರಾಗ್ಯನು ಪ್ರವೇಶಿಸುವನು)

ವೈರಾಗ್ಯ—(ಯೋಚಿಸಿ) ಬ್ರಹ್ಮನು ನೈದಿಲೆಯ ದಳದ ಅಗ್ರಭಾಗದಂತೆ ಅತಿ ಸೂಕ್ಷ್ಮವಾದ ದೇಹವನ್ನು ಸೃಷ್ಟಿಸುವಾಗ, ಚರ್ಮದಿಂದ ಮಾತ್ರ ಮಾಂಸವನ್ನು ಮುಚ್ಚದೆ ಬಿಟ್ಟುಬಿಟ್ಟಿದ್ದರೆ ಸೋರುವ ರಕ್ತದಿಂದ ಕೂಡಿದ ಮಾಂಸವನ್ನು ತಿನ್ನುವ ಆಶೆಯಿಂದ ಬಂದು ಬೀಳುವ ಹದ್ದು, ಕಾಗೆ, ತೋಳ, ಇವುಗಳನ್ನು ಓಡಿಸುವರು ಯಾರು ? ಮತ್ತು ಸಂಪತ್ತುಗಳು ಉಯ್ಯಾಲೆಯಂತೆ ಚಂಚಲಗಳಾಗಿವೆ. ಸ್ರಕ್ಚಂದನ ವನಿತಾದಿಗಳಿಂದ ಉಂಟಾಗುವ ಸುಖಗಳು ಅವಸಾನದಲ್ಲಿ ಯಾವಾಗಲೂ ವಿಷಾದವನ್ನೇ ಉಂಟುಮಾಡುತ್ತವೆ. ಈ ದೇಹವು ಆಪತ್ತುಗಳಿಗೆಲ್ಲಾ ಗೇಹವು. ದ್ರವ್ಯವು ಬಹು ವಿಧವಾದ ಮರಣಕ್ಕೆ ಕಾರಣವು. ಜನಗಳು ಯಾವಾಗಲೂ ಹೆಚ್ಚಿದ ಶೋಕವುಳ್ಳವರಾಗಿರುವರು. ಸ್ತ್ರೀಯರುಗಳು ಸರ್ವದಾ ಅನರ್ಥಗಳಿಂದ ತುಂಬಿರುವರು. ಹೀಗಿದ್ದಾಗ್ಯೂ ಈ ಘೋರವಾದ ಸಂಸಾರದಲ್ಲಿಯೇ

ಆಶೆಯುಳ್ಳವನಾಗಿರುವನೇ ವಿನಾ ಪರಮಾತ್ಮನಲ್ಲಿ ಆಶೆಯುಳ್ಳವನಾಗಿರುವುದಿಲ್ಲ.

ಸರಸ್ವತಿ—ವತ್ಸನೇ, ವೈರಾಗ್ಯನು ಬಂದಿರುವನು.

ಮನಸ್ಸು—ಹಾ ಮಗನೇ, ವೈರಾಗ್ಯನೇ ! ಎಲ್ಲಿದ್ದೀಯೇ ?

ವೈರಾಗ್ಯ—ಸಮೀಪಕ್ಕೆ ಬಂದು, ಇಗೋ ನಾನು ನಮಸ್ಕರಿಸುತ್ತೇನೆ.

ಮನಸ್ಸು—ಮಗನೇ ! ಹುಟ್ಟಿದ ಮಡನೆಯೇ ನನ್ನನ್ನು ಬಿಟ್ಟು, ಎಲ್ಲಿಯೋ ಹೊರಟು ಹೋಗಿಬಿಟ್ಟೆ. ನನ್ನನ್ನು ಅಪ್ಪಿಕೋ.

ವೈರಾಗ್ಯ—(ಹಾಗೆಯೇ ಮಾಡುವನು)

ಮನಸ್ಸು—ಮಗನೇ, ನಿನ್ನನ್ನು ನೋಡಿದ್ದರಿಂದ ಶೋಕವೆಲ್ಲವೂ ಶಾಂತವಾಯಿತು.

ವೈರಾಗ್ಯ—ತಂದೆಯೇ, ಈ ವಿಷಯದಲ್ಲಿ ಶೋಕಕ್ಕೆ ಅವಕಾಶವೆಲ್ಲಿ ? ಏಕೆಂದರೆ ದಾರಿಯಲ್ಲಿ ಮಾರ್ಗಸ್ಥರು ಸೇರುವಂತೆಯೂ, ನದಿಯಲ್ಲಿ ದಡದಿಂದ ಕುಸಿದು ಬಿದ್ದ ಮರಗಳು ಸೇರುವಂತೆಯೂ, ಆಕಾಶದಲ್ಲಿ ಮೇಘಗಳು ಸೇರುವಂತೆಯೂ, ಸಮುದ್ರದಲ್ಲಿ ವರ್ತಕರುಗಳು ಸೇರುವಂತೆಯೂ, ತಾಯಿ, ತಂದೆ, ಮಗ, ಬಂಧು, ಭ್ರಾತ, ಪ್ರಿಯ ಮೊದಲಾದವರು ಸೇರಿ ಅವುಗಳು ಅಗಲುವಂತೆಯೇ ಇವರೂ ಅಗಲುವರು. ಹೀಗೆ ಇವರ ವಿಯೋಗವು ಸಿದ್ಧವಾಗಿರುವಲ್ಲಿ, ತಿಳಿದವರಿಗೆ ಮೋಹವು ಏಕೆ ಹುಟ್ಟುವುದು ?

ಮನಸ್ಸು—(ಸಂತೋಷದಿಂದ) ದೇವಿಯೇ, ವತ್ಸನು ಹೇಳುವುದು ನಿಜ. ಈಗ ನವಯುವತಿಯರಾದ ಆ ಸ್ತ್ರೀಯರುಗಳೂ, ಭ್ರಮರ ಸಂಚಾರದಿಂದ ಕಂಗೊಳಿಸುವ ಆ ವೃಕ್ಷಗಳೂ, ಅರಳಿದ ಮಲ್ಲಿಗೆಯ ವಾಸನೆಯಿಂದ ಕೂಡಿದ ಆ ಮಂದಮಾರುತವೂ, ಇವುಗಳನ್ನು ವಿವೇಕವನ್ನು ಹೊಂದಿ, ಅಜ್ಞಾನಗಳೆಲ್ಲವನ್ನೂ ಅಳಿದು ಇರುವ ಈ ನನ್ನ ಹೃದಯವು ಮರೀಚಿಕೆಯ ಜಲದಂತೆ ನೋಡುತ್ತದೆ,

ಸರಸ್ವತಿ—ವತ್ಸ, ಇದು ಹೀಗೆಯೇ ಸರಿ. ಆದರೂ ಗೃಹಸ್ಥನಾದವನು ಒಂದು ಮುಹೂರ್ತವೂ ಕೂಡ ಅನಾಶ್ರಮಿಯಾಗಿರಬಾರದು. ಆದ್ದರಿಂದ ಇದು ಮೊದಲುಗೊಂಡು ನಿವೃತ್ತಿದೇವಿಯೇ ನಿನ್ನ ಪತ್ನಿಯಾಗಿರಲಿ.

ಮನಸ್ಸು—(ನಾಚಿಕೆಯಿಂದ) ದೇವಿಯ ಅಪ್ಪಣೆಯಾದಂತೆ.

ಸರಸ್ವತಿ—ಶಮ, ದಮ, ಸಂತೋಷ ಮೊದಲಾದ ಪುತ್ರರುಗಳೂ ನಿನ್ನನ್ನು ಉಪಚರಿಸಲಿ. ಯಮನಿಯಮಾದಿಗಳೆಲ್ಲರೂ ನಿನ್ನ ಮಂತ್ರಿಗಳಾಗಿರಲಿ. ವಿವೇಕನೂ ಕೂಡ ನಿನ್ನ ಅನುಗ್ರಹದಿಂದ ಉಪನಿಷದ್ದೇವಿಯೊಂದಿಗೆ ಯುವರಾಜನಾಗಿರಲಿ. ಈ ಮೈತ್ರಿ, ಕರುಣಾ, ಮುದಿತಾ, ಉಪೇಕ್ಷಾ, ನಾಲ್ಕು ಸಹೋದರಿಯರೂ ವಿಷ್ಣುಭಕ್ತಿ ದೇವಿಯ ಅಪ್ಪಣೆಯಿಂದ ನಿನ್ನಲ್ಲಿಗೆ ಬಂದಿರುವರು. ಅವರನ್ನ ಗೌರವಿಸು.

ಮನಸ್ಸು—ನಿನ್ನ ಅಪ್ಪಣೆಯನ್ನೆಲ್ಲವನ್ನೂ ಶಿರಸಾ ವಹಿಸಿದೆನು (ಎಂದು ನಮಸ್ಕರಿಸುವನು)

ಸರಸ್ವತಿ—ಯಮ, ನಿಯಮ, ಆಸನ, ಪ್ರಾಣಾಯಾಮ ಮೊದಲಾದ ಇವರುಗಳನ್ನು ಪ್ರೀತಿಯಿಂದ ನೋಡುತ್ತಿರಬೇಕು. ಇವರೊಂದಿಗೆ ನೀನು ಸಾಂಮ್ರಾಜ್ಯದಲ್ಲಿರು. ನೀನು ಸ್ವಸ್ಥನಾದರೆ, ಕ್ಷೇತ್ರಜ್ಞನಾದ ಆತ್ಮನೂ ಕೂಡ ಸ್ವಸ್ವರೂಪವನ್ನು ಹೊಂದುವನು. ಏಕೆಂದರೆ ನಿನ್ನ ಸಹವಾಸದಿಂದ ಶಾಶ್ವತನಾಗಿದ್ದಾಗ್ಯೂ, ಆತ್ಮನು ಜನ್ಮಜರಾಮರಣಗಳಿಂದ ಬೇರ್ಪಡಿಸಲ್ಪಟ್ಟವನಾಗಿ ಸಮುದ್ರದ ಅಲೆಗಳಲ್ಲಿ ಅನೇಕ ಸೂರ್‍ಯರು ಕಾಣುವ ಹಾಗೆ ಒಬ್ಬನೇ ಆದಾಗ್ಯೂ ನಾನಾವಿಧನಾದವನಂತೆ ಆಗಿದ್ದನು. ನೀನು ಸುಮ್ಮನಾದರೆ ಸಹಜಾನಂದನಾದ ಆತ್ಮನು ನಿರ್ಮಲವಾದ ಕನ್ನಡಿಯಲ್ಲಿ ಸೂರ್‍ಯನು ಕಾಣುವಂತೆ ಕಾಣುವನು. ಇರಲಿ, ಜ್ಞಾತಿಗಳಿಗೆ ಉದಕದಾನಕ್ಕೋಸ್ಕರ ನದಿಗೆ ಹೋಗೋಣ.

ಮನಸ್ಸು—ಅಪ್ಪಣೆ (ಎಂದೆಲ್ಲರೂ ಹೊರಟು ಹೋಗುವರು.)

---

# ಷಷ್ಠಾಂಕ

(ಶಾಂತಿಯು ಪ್ರವೇಶಿಸುವಳು.)

ಶಾಂತಿ—ಪುತ್ರರಾದ ಕಾಮಾದಿಗಳೆಲ್ಲರೂ ಮೃತರಾದರು. ಮೋಹನು ಎಲ್ಲಿಯೋ ಅಡಗಿಹೋದನು. ವೈರಾಗ್ಯನು ಮನಸ್ಸಿನ ಸಮೀಪವನ್ನು ಸೇರಿದನು. ಅವಿದ್ಯಾ, ಅಸ್ಮಿತಾ, ರಾಗ, ದ್ವೇಷ, ಅಭಿನಿವೇಶಗಳೆಂಬ ಐದು ಕ್ಲೇಶಗಳೂ ಹೋದವು. ಈಗ ಪುರುಷನು ಸ್ವಸ್ವರೂಪಜ್ಞಾನವನ್ನು ಪ್ರಕಾಶಪಡಿಸುತ್ತಲಿದಾನೆ. ಇನ್ನು ಉಪನಿಷದ್ದೇವಿಯನ್ನು ಸಮಾಧಾನ ಪಡಿಸಿ, ವಿವೇಕನ ಸಮೀಪವನ್ನು ಹೊಂದುವಂತೆ ಮಾಡಬೇಕು. ಮಹಾರಾಜನಾದ ವಿವೇಕನು ಹಾಗೆಯೇ ಆಜ್ಞಾಪಿಸಿರುವನು. (ನೋಡಿ) ತಾಯಿಯಾದ ಶ್ರದ್ಧೆಯು ಇಲ್ಲಿಯೇ ಬರುತ್ತಿರುವಳು. ಸಂತೋಷದಿಂದ ಮನಸ್ಸಿನಲ್ಲಿ ಏನೋ ಯೋಚಿಸಿಕೊಂಡು ಬರುತ್ತಲಿದ್ದಾಳೆ. (ಸಮೀಪಕ್ಕೆ ಹೋಗಿ) ಮಾತೇ, ಏನೋ ಯೋಚಿಸುತ್ತಾ ಎಲ್ಲಿಗೆ ಹೊರಟಿರುವಿ ?

ಶ್ರದ್ಧೆ—ವತ್ಸೆ, ಈಗ ಬಹು ಕಾಲಕ್ಕೆ ರಾಜಕುಲವು ಆರೋಗ್ಯವಾಗಿರುವುದನ್ನು ನೋಡುವ ನನ್ನ ಕಣ್ಣುಗಳಲ್ಲಿ ಅಮೃತವನ್ನು ತುಂಬಿದಂತಿದೆ. ಈ ರಾಜಕುಲದಲ್ಲಿ ಈಗ ದುಷ್ಟರಿಗೆ ನಿಗ್ರಹವೂ, ಸತ್ಪುರುಷರಾದ ಶಮಾದಿಗಳಿಗೆ ಪೂಜ್ಯತೆಯೂ ನಡೆಯುತ್ತಲಿದೆ. ಈಶ್ವರನನ್ನ ಅನುವರ್ತಿಸಿದ ಜೀವಾತ್ಮರುಗಳು ಜಗದೀಶ್ವರನಾದ ನಾರಾಯಣನನ್ನ ಆರಾಧಿಸುತ್ತಿದ್ದಾರೆ.

ಶಾಂತಿ—ಮನಸ್ಸಿನ ವಿಷಯದಲ್ಲಿ ಪುರುಷನ ಪ್ರವೃತ್ತಿಯು ಹೇಗಿರುವುದು ?

ಶ್ರದ್ಧೆ—ವಧಾರ್ಹನಲ್ಲಿಯೂ, ನಿಗ್ರಹಿಸುವುದಕ್ಕೆ ಅರ್ಹನಾದವನಲ್ಲಿಯೂ ಹೇಗಿರಬೇಕೋ ಹಾಗಿರುವುದು.

ಶಾಂತಿ—ಹಾಗಾದರೆ ಸ್ವಾಮಿಯೇ ಸಾಮ್ರಾಜ್ಯವನ್ನು ಅಲಂಕರಿಸುವನೇನು ?

ಶ್ರದ್ಧೆ—ಹೌದು. ಆತ್ಮಾನುಸಂಧಾನವನ್ನು ಮಾಡುವುರಿಂದ ಅವನೇ ಸ್ವಾರಾಟ್, ಅವನೇ ಸಮ್ರಾಟ್.

ಶಾಂತಿ—ಮಾಯೆಯ ವಿಷಯದಲ್ಲಿ ಅವನ ಅನುಗ್ರಹವು ಹೇಗಿರುವುದು ?

ಶ್ರದ್ಧೆ—ಅನುಗ್ರಹವೆಲ್ಲಿ ? ನಿಗ್ರಹವೆಂದು ಕೇಳು. ದೇವನು ಈ ಮಾಯೆಯು ಎಲ್ಲಾ ಅನರ್ಥಕ್ಕೂ ಕಾರಣಳು. ಸರ್ವ ವಿಧದಲ್ಲಿಯೂ ಇವಳನ್ನು ನಿಗ್ರಹಿಸಬೇಕೆಂದು ತಿಳಿದುಕೊಂಡಿದಾನೆ.

ಶಾಂತಿ—ಹಾಗಾದರೆ ಈಗ ರಾಜಕುಲದ ಸ್ಥಿತಿಯು ಹೇಗಿರುವುದು ?

ಶ್ರದ್ಧೆ—ಕೇಳು. ನಿತ್ಯಾನಿತ್ಯ ವಿಚಾರಿಣಿಯು ಪ್ರೇಮಪಾತ್ರಳಾಗಿರುವಳು. ವೈರಾಗ್ಯನೊಬ್ಬನೇ ಹಿತಪ್ರಾಪ್ತಿಯನ್ನೂ, ಅಹಿತ ಪರಿಹಾರವನ್ನೂ ಮಾಡುವ ಸ್ನೇಹಿತನಾಗಿರುವನು. ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿಗಳೇ ಸನ್ಮಿತ್ರರಾಗಿರುವರು. ಶಮ, ದಮ, ಸಂತೋಷ ಮೊದಲಾದವರೇ ಸಹಾಯಕರಾಗಿರುವರು. ಮೈತ್ರಿ, ಕರುಣೆ, ಮುದಿತೆ, ಉಪೇಕ್ಷೆ ಇವರುಗಳು ಪರಿಚಾರಿಣಿಯರಾಗಿರುವರು. ಮುಮುಕ್ಷೆಯು ಪ್ರಿಯಸಖಿಯಾಗಿರುವಳು. ಮೋಹ, ಮಮತೆ, ಸಂಕಲ್ಪ, ಸಂಗ, ಈ ಶತ್ರುಗಳು ನಿತ್ಯವೂ ಬಲಾತ್ಕಾರವಾಗಿ ನಾಶಪಡಿಸತಕ್ಕವುಗಳಾಗಿವೆ.

ಶಾಂತಿ—ಧರ್ಮನ ವಿಷಯದಲ್ಲಿ ಸ್ವಾಮಿಯ ಪ್ರೇಮವು ಹೇಗಿರುವುದು ?

ಶ್ರದ್ಧೆ—ವತ್ಸೆ, ವೈರಾಗ್ಯನು ಸಮೀಪದಲ್ಲಿರುವುದಕ್ಕೆ ಆರಂಭಿಸಿದಂದಿನಿಂದ ಸ್ವಾಮಿಯು ಐಹಿಕಾಮುಷ್ಮಿಕ ಫಲಭೋಗಗಳಲ್ಲಿ ಅತ್ಯಂತ ವಿಮುಖನಾಗಿರುವನು. ಪಾಪಕ್ಕೆ ಫಲವಾದ ನರಕದಿಂದ ಭಯಪಡುವಂತೆಯೇ ನಶ್ವರವಾದ ಪುಣ್ಯಫಲದಿಂದ ಭಯಪಟ್ಟು ಫಲಸಂಬಂಧವನ್ನೇ ಬಿಟ್ಟು ಸುಕೃತ ಕರ್ಮವನ್ನು ಯಾವ ವಿಧದಿಂದಲೂ ಸ್ವೀಕರಿಸುವುದೇ ಇಲ್ಲ. ಆದರೆ ಸ್ವಾಮಿಯು ಈ ರೀತಿಯಲ್ಲಿ ಆತ್ಮೈಕನಿಷ್ಠನಾಗಿರುವುದನ್ನು ನೋಡಿ ಈ ಧರ್ಮನು ತಾನೇ ಸುಮ್ಮನಾಗಿಬಿಟ್ಟಿದ್ದಾನೆ.

ಶಾಂತಿ—ಯೋಗವಿಘ್ನಗಳೊಂದಿಗೆ ಮಹಾಮೋಹನು ಎಲ್ಲಿಯೋ ಅವಿತುಕೊಂಡಿದ್ದನಷ್ಟೆ. ಅವನ ವೃತ್ತಾಂತವೇನು ?

ಶ್ರದ್ಧೆ—ವತ್ಸೆ, ಅಷ್ಟು ದುರವಸ್ಥೆಯನ್ನು ತಾನು ಹೊಂದಿದ್ದರೂ, ಆ ನೀಚನಾದ ಮಹಾಮೋಹನು ಸ್ವಾಮಿಯನ್ನು ವಂಚಿಸುವುದಕ್ಕೋಸ್ಕರ ಮಧುಮತೀ

ವಿದ್ಯೆಯೊಂದಿಗೆ ಯೋಗವಿಘ್ನಗಳನ್ನೂ ಕಳುಹಿಸಿದನು. ಸ್ವಾಮಿಯಾದ ವಿವೇಕನು ಇವುಗಳಲ್ಲಿ ಆಸಕ್ತನಾದರೆ ಉಪನಿಷದ್ದೇವಿಯ ಯೋಚನೆಯನ್ನೇ ಮಾಡುವುದಿಲ್ಲವೆಂದು ತಿಳಿದುಕೊಂಡಿದ್ದನು.

ಶಾಂತಿ—ಆಹಾ ! ಆಮೇಲೆ.

ಶ್ರದ್ಧೆ—ಆಮೇಲೆ ಅವುಗಳು ಬಂದು, ಇಂದ್ರಜಾಲವನ್ನು ತೋರಿಸಿದವು ಹೇಗೆಂದರೆ, ಈ ಪುರುಷನು ನೂರು ಯೋಜನ ದೂರದಲ್ಲಿ ಆದ ಶಬ್ದವನ್ನು ಇಲ್ಲ ಕೂತುಕೊಂಡು ಕೇಳುತ್ತಾನೆ. ಅತಿ ಪ್ರಸಿದ್ಧಗಳಾದ ಕಿವಿಯಲ್ಲಿ ಕೇಳದೇನೇ ಇರುವ ವೇದ, ಪುರಾಣ, ಭಾರತ, ಇವುಗಳ ಕಥೆಗಳೆಲ್ಲವೂ ಕೂಡ ಪ್ರಕಾಶವಾಗುತ್ತವೆ. ತರ್ಕಾದಿ ಶಾಸ್ತ್ರಗಳೆಲ್ಲವೂ ಆವಿರ್ಭವಿಸುತ್ತವೆ. ವ್ಯಾಕರಣ ಶುದ್ಧಗಳಾದ ಪದಗಳಿಂದ ಸ್ವೇಚ್ಛೆಯಾಗಿ ಶಾಸ್ತ್ರಗಳನ್ನೂ, ಕಾವ್ಯಗಳನ್ನೂ ರಚಿಸುತ್ತಾನೆ. ಭೂರ್ಭುವರಾದಿ ಲೋಕಗಳಲ್ಲೆಲ್ಲಾ ಸಂಚರಿಸುತ್ತಾನೆ. ಮೇರುಪರ್ವತದ ಮೇಲ್ಭಾಗಗಳಲ್ಲಿರುವ ರತ್ನಖಚಿತವಾದ ಸ್ಥಳಗಳೆಲ್ಲವನ್ನೂ ನೋಡುತ್ತಾನೆ. ಈ ಮಧುಮತೀ ಸಿದ್ಧಿಯಿಂದ ಕಲ್ಪಿತವಾದ ಭೂಮಿಯನ್ನು ಹೊಂದಿದ ಮನುಷ್ಯನು ಆಯಾಯ ಸ್ಥಾನಾಭಿಮಾನಿಗಳಾದ ದೇವತೆಗಳಿಂದ ಪ್ರಲೋಭನವನ್ನು ಹೊಂದುತ್ತಾನೆ. ಹೇಗೆಂದರೆ ಎಲೈ ಪುರುಷನೇ ಇಲ್ಲಿರು. ಬಹಳ ಸುಂದರವಾದ ಪ್ರದೇಶವಾಗಿದೆ. ಇಲ್ಲಿ ವಿವಿಧ ವಿಲಾಸಗಳಿಂದಲೂ, ವೇಷಗಳಿಂದಲೂ, ಲಾವಣ್ಯಗಳಿಂದಲೂ ಕೂಡಿದ ಪುಣ್ಯಾಸಕ್ತೆಯರಾದ, ಮಂಗಳದ್ರವ್ಯಗಳು, ಅರ್ಘ್ಯಗಳು ಇವುಗಳನ್ನು ಕೈಯಲ್ಲಿ ಹಿಡಿದುಕೊಂಡಿರುವ ಪ್ರೇಮಚತುರರಾದ ವಿದ್ಯಾಧರಿಯರು ನಿನ್ನನ್ನು ಹೊಂದಿ ಉಪಚರಿಸುವರು. ಆದ್ದರಿಂದ ಇಲ್ಲಿ ಬಾ. ಚಿನ್ನದ ಮರಳುಗಳಿಂದ ಕೂಡಿ ಹರಿಯುವ ನದಿಗಳು ಕಮಲದಂತೆ ಸುಂದರವಾದ ಮುಖವುಳ್ಳ ಸ್ತ್ರೀಯರುಗಳೂ, ಗಾರುತ್ಮತ ರತ್ನಕಲ್ಪಿತಗಳಾದ ವನಪಂಗ್ತಿಗಳೂ ಇವುಗಳನ್ನನುಭವಿಸು. ಇವುಗಳೆಲ್ಲವೂ ನಿನ್ನ ಪುಣ್ಯದಿಂದ ಲಭಿಸಿದ ಭೋಗಗಳು ಎಂದು ಆ ದೇವತೆಗಳು ಪ್ರಲೋಭವನ್ನುಂಟುಮಾಡುವರು.

ಶಾಂತಿ—ಆಮೇಲೆ.

ಶ್ರದ್ಧೆ—ಪುತ್ರಿಯೇ, ಇದನ್ನು ಕೇಳಿ ಮಾಯೆಯು ಶ್ಲಾಘಿಸಿದಳು. ಮನಸ್ಸು ಅನುಮೋದಿಸಿದನು. ಸಂಕಲ್ಪನು ಉತ್ಸಾಹಗೊಳಿಸಿದನು. ಇದನ್ನೆಲ್ಲ ವನ್ನೂ ನೋಡಿ, ಸ್ವಾಮಿಯೂ ಕೂಡ ಸಮ್ಮತಿ ಪಟ್ಟಂತೆ ಕಂಡನು.

ಶಾಂತಿ—(ಬಹಳ ದುಃಖದೊಡನೆ) ಆಹ ! ಕಷ್ಟ ! ತಿರಿಗಿಯೂ ಸಂಸಾರದ ಬಲೆ ಯಲ್ಲಿ ಸ್ವಾಮಿಯು ಬೀಳುತ್ತಾನೆ.

ಶ್ರದ್ಧೆ— ಇಲ್ಲ, ಇಲ್ಲ.

ಶಾಂತಿ—ಆದರೆ ಆಮೇಲೆ ಏನಾಯಿತು ?

ಶ್ರದ್ಧೆ—ಅನಂತರದಲ್ಲಿ ಪಾರ್ಶ್ವದಲ್ಲಿದ್ದ ತರ್ಕನು ಕೆಂಡದಂತೆ ಕಣ್ಣನ್ನು ಕೆಂಪಗೆ ಮಾಡಿಕೊಂಡು ಅವರೆಲ್ಲರನ್ನೂ ನೋಡುತ್ತಾ, ಸ್ವಾಮಿಗೆ ಹೀಗೆ ಹೇಳಿ ದನು:—

"ಸ್ವಾಮಿಯೇ, ಮಾಂಸದಲ್ಲಿ ಆಶೆಯುಳ್ಳ ಧೂರ್ತ ಬಕಗಳಂತೆ ವಿಷಯಾಸ ಕ್ತರಾಗಿ ಇರುವ ಈ ಸಭಾ ವಂಚಕರುಗಳು ಪುನಃ ಪೂರ್ವದಂತೆಯೇ ವಿಷ ಮಗಳಾದ ಅದೇ ವಿಷಯಾಗ್ನಿಗಳಲ್ಲಿ ನಿನ್ನನ್ನು ತಳ್ಳುತ್ತಿರುವರು. ನೀನು ಅದನ್ನು ತಿಳಿದುಕೊಳ್ಳದೆ ಇರುವಿಯಲ್ಲಾ ! ಸಂಸಾರ ಸಮುದ್ರವನ್ನು ದಾಟುವುದಕ್ಕೋಸ್ಕರ ದೊರೆಕಿರುವ ಯೋಗನೆಂಬ ತೆಪ್ಪವನ್ನು ಅಹಂಕಾರ ದಿಂದ ಪರಿತ್ಯಜಿಸಿ, ಬೆಂಕಿಯ ನದಿಗೆ ಪ್ರವೇಶಿಸಬಹುದೇ ?"

ಶಾಂತಿ—ಆಮೇಲೆ.

ಶ್ರದ್ಧೆ—ಅನಂತರದಲ್ಲಿ ಆ ಮಾತನ್ನು ಕೇಳಿ ಸ್ವಾಮಿಯು ವಿಷಯಗಳಿಗೆ ಕೈಮು ಗಿದು ಮಧುಮತಿಯನ್ನು ತಿರಸ್ಕರಿಸಿದನು.

ಶಾಂತಿ—ಸಂತೋಷವಾಯಿತು. ನೀನೆಲ್ಲಿಗೆ ಹೊರಟಿರುವೆ ?

ಶ್ರದ್ಧೆ—"ವಿವೇಕನನ್ನು ನೋಡಲಿಚ್ಛೆಯುಳ್ಳವನಾಗಿದ್ದೇನೆ ಜಾಗ್ರತೆ, ಮಾಡು" ಎಂದು ಸ್ವಾಮಿಯು ನನಗೆ ಆಜ್ಞಾಪಿಸಿದನು. ಆದ್ದರಿಂದ ಮಹಾರಾಜನ ಸನ್ನಿಧಿಗೆ ಹೊರಟಿದ್ದೇನೆ.

ಶಾಂತಿ—ನನಗೂ ಉಪನಿಷದ್ದೇವಿಯನ್ನು ಕರೆತರುವಂತೆ ಮಹಾರಾಜನು ಆಜ್ಞಾ ಪಿಸಿರುವನು. ಆದ್ದರಿಂದ ರಾಜಾಜ್ಞೆಯನ್ನು ನೆರವೇರಿಸೋಣ (ಎಂದು ಇಬ್ಬರೂ ಹೊರಟು ಹೋಗುವರು.)

(ಅನಂತರದಲ್ಲಿ ಪುರುಷನು ಪ್ರವೇಶಿಸುವನು.)

ಪುರುಷ—(ಆಲೋಚಿಸಿ ಸಂತೋಷದಿಂದ) ದೇವಿಯಾದ ವಿಷ್ಣುಭಕ್ತಿಯ ಮಹಿಮೆಯು ಆಶ್ಚರ್ಯಕರವಾದದ್ದು. ಆ ಮಹಿಮೆಯ ಅನುಗ್ರಹದಿಂದ ನಾನು ಈ ಸಂಸಾರ ಮಹಾಸಾಗರದಲ್ಲಿ ದೊಡ್ಡ ದೊಡ್ಡ ಅಲೆಗಳಂತಿರುವ ಅವಿದ್ಯಾ, ಅಸ್ಮಿತಾ, ರಾಗ, ದ್ವೇಷ, ಅಭಿನಿವೇಶಗಳೆಂಬ ಪಂಚಕ್ಲೇಶಗಳನ್ನು ದಾಟಿದೆನು. ದೊಡ್ಡ ದೊಡ್ಡ ಸುಳಿಗಳಂತಿರುವ ಮಮತೆಯನ್ನು ತಪ್ಪಿಸಿಕೊಂಡೆನು. ಪುತ್ರರು, ಮಿತ್ರರು, ಕಳತ್ರರು, ಬಂಧುಗಳು ಇವರುಗಳೆಂಬ ಮೊಸಳೆಗಳಿಗೆ ತುತ್ತಾಗುತ್ತಿದ್ದದ್ದನ್ನು ಪರಿಹರಿಸಿಕೊಂಡೆನು. ಬಡಬಾಗ್ನಿಯಂತೆ ಇದ್ದ ಕೋಪವನ್ನು ನಿರಾಕರಿಸಿದೆನು. ಬಳ್ಳಿಗಳಿಂದ ಕಟ್ಟಿದಂತೆ ಇದ್ದ ತೃಷ್ಣೆಯ ಗಂಟನ್ನು ಸಡಲಿಸಿದೆನು. ಈಗ ತೀರಕ್ಕೆ ಬಂದಹಾಗಾಯಿತು.

(ಉಪನಿಷದ್ದೇವಿಯೂ ಶಾಂತಿಯೂ ಇಬ್ಬರೂ ಪ್ರವೇಶಿಸುವರು.)

ಉಪನಿಷದ್ದೇವಿ—ಸಖೀ! ಅಷ್ಟು ನಿರ್ದಯನಾದ ಸ್ವಾಮಿಯ ಮುಖವನ್ನು ಹೇಗೆ ನೋಡಲಿ. ಸಾಮಾನ್ಯ ಸ್ತ್ರೀಯಂತೆ ಬಹುಕಾಲದವರೆಗೆ ನನ್ನನ್ನು ಅಸಹಾಯಳನ್ನಾಗಿ ಪರಿತ್ಯಾಗಮಾಡಿದ್ದನಲ್ಲಾ.

ಶಾಂತಿ—ದೇವಿ, ಅಂಥಾ ವಿಪತ್ತಿಗೆ ಒಳಗಾಗಿದ್ದ ಸ್ವಾಮಿಯನ್ನು ನೀನು ಹೀಗೆ ದೂಷಿಸಬಹುದೇ?

ಉಪನಿಷದ್ದೇವಿ—ಸಖೀ, ನನ್ನ ಅಂಥಾ ಅವಸ್ಥೆಯನ್ನು ನೀನು ಕಾಣೆ. ಆದ್ದರಿಂದಲೇ ಹೀಗೆ ಹೇಳುವಿ. ಕೇಳು. ವಿವೇಕನು ನನ್ನನ್ನು ಬಿಟ್ಟು ದೂರವಾಗಿರುವುದನ್ನು ಕಂಡು ದುರ್ಬುದ್ಧಿಯುಳ್ಳ ಪಾಪಿಗಳನೇಕರು ನನ್ನನ್ನು ತಮ್ಮಗಳ ದಾಸಿಯನ್ನಾಗಿ ಮಾಡಿಕೊಳ್ಳುವುದಕ್ಕಾಗಿ, ಕೈಯನ್ನು ಹಿಡಿದು ಎಳೆದು, ಕೈಗಳ ಕಂಕಣಗಳಲ್ಲಿದ್ದ ಮಣಿಗಳೆಲ್ಲವೂ ಉದುರಿಹೋಗಿವೆ ನೋಡು. ಚೂಡಾರತ್ನವನ್ನು ತೆಗೆದುಕೊಳ್ಳುವುದಕ್ಕೋಸ್ಕರ ಹಿಡಿದೆಳೆದು ಕೇಶಪಾಶಗಳೆಲ್ಲವೂ ಕೆದರಿಹೋಗಿವೆ ನೋಡು.

ಶಾಂತಿ—ಸಖೀ, ಇದೆಲ್ಲವೂ ಆ ಮಹಾಮೋಹನ ದುಶ್ಚೇಷ್ಟೆಯು. ಇದರಲ್ಲಿ

ಸ್ವಾಮಿಯ ತಪ್ಪಿಲ್ಲ. ಆ ಮಹಾಮೋಹನು ಕಾಮಾದಿಗಳ ಮೂಲಕ ಮನಸ್ಸನ್ನು ಮರಳುಮಾಡಿ ವಿವೇಕನು ನಿನ್ನನ್ನು ಬಿಡುವಂತೆ ಮಾಡಿದನು. ಸ್ವಾಮಿಗೆ ಸಂಕಟವು ಒದಗಿದಾಗ ಸಮಯವರಿತು ನಿರೀಕ್ಷಿಸುವುದು ಕುಲ ಸ್ತ್ರೀಯರುಗಳಿಗೆ ಸಹಜವಾದ ಶೀಲವು. ಆದ್ದರಿಂದ ಬಾ. ದರ್ಶನದಿಂದಲೂ, ಪ್ರಿಯಾಲಾಪದಿಂದಲೂ, ಸ್ವಾಮಿಯನ್ನು ಸಂತೋಷ ಪಡಿಸು. ಈಗ ಶತ್ರುಗಳೆಲ್ಲರೂ ಹತರಾದರು. ನಿನ್ನ ಮನೋರಥವು ಸಂಪೂರ್ಣವಾಯಿತು.

ಉಪನಿಷದ್ದೇವಿ—ಪತಿಯೂ, ಪುರುಷನೂ ಸಹ ಇಬ್ಬರೂ ಮಾಡುವ ಪ್ರಶ್ನೆಗಳಿಗೆ ತಕ್ಕ ಉತ್ತರವನ್ನು ಕೊಟ್ಟು ಅವರುಗಳ ಮನಸ್ಸಿಗೆ ಸಂತೋಷವನ್ನುಂಟುಮಾಡಬೇಕೆಂದು ನಾನು ಬರುವಾಗ ಗೀತೆಯು ನನಗೆ ರಹಸ್ಯವಾಗಿ ಹೇಳಿದಳು. ಗುರುಗಳ ಎದುರಿಗೆ ನಾನು ಹೇಗೆ ಧಾರ್ಷ್ಟ್ಯವನ್ನು ಧರಿಸಲಿ? ನೀನು ಹೇಳು.

ಶಾಂತಿ—ದೇವಿಯೇ, ಪೂಜ್ಯಳಾದ ಗೀತೆಯ ಮಾತನ್ನು ನೀನು ಏನೂ ವಿಚಾರ ಮಾಡಬೇಕಾಗಿಲ್ಲ. ಇದೇ ವಿಷಯವನ್ನು ವಿಷ್ಣುಭಕ್ತಿದೇವಿಯು ವಿವೇಕನಿಗೆ ತಿಳಿಸಿರುವಳು. ಆದ್ದರಿಂದ ಬಾ. ಪತಿಯನ್ನೂ, ಆದಿಪುರುಷನನ್ನೂ ಸಂತೋಷಗೊಳಿಸು.

ಉಪನಿಷದ್ದೇವಿ—ಹಾಗೆಯೇ ಆಗಲಿ.

(ರಾಜನೂ ಶ್ರದ್ಧೆಯೂ ಪ್ರವೇಶಿಸುವರು.)

ರಾಜ—ವತ್ಸೆ, ಶ್ರದ್ಧೆ, ಶಾಂತಿಯು ಪ್ರಿಯಳಾದ ಉಪನಿಷದ್ದೇವಿಯನ್ನು ನೋಡುವಳೋ ?

ಶ್ರದ್ಧೆ—ಸ್ವಾಮಿ, ತಮ್ಮ ಅಪ್ಪಣೆಯನ್ನು ತೆಗೆದುಕೊಂಡು ಹೋಗಿರುವ ಶಾಂತಿಯು ಅವಳನ್ನು ಹೇಗೆತಾನೇ ನೋಡದೇ ಇರುವಳು.

ರಾಜ—ಹೇಗೆ ನೋಡುವಳು ?

ಶ್ರದ್ಧೆ—ಸ್ವಾಮಿಯೇ, ಮಂದರ ಪರ್ವತದಲ್ಲಿ ಮಧುಸೂದನನ ಮಂದಿರದಲ್ಲಿ ಗೀತೆಯೊಂದಿಗೆ ತರ್ಕವಿದ್ಯೆಯ ಭಯದಿಂದ ಉಪನಿಷದ್ದೇವಿಯು ವಾಸಮಾಡು

ತ್ತಿರುವಳೆಂದು, ದೇವಿಯಾದ ವಿಷ್ಣುಭಕ್ತಿಯು ಶಾಂತಿಗೆ ಆದಿಯಲ್ಲಿಯೇ ತಿಳಿಸಿರುವಳು.

ರಾಜ—ತರ್ಕವಿದ್ಯೆಯಿಂದ ಏನು ಭಯವು?

ಶ್ರದ್ಧೆ—ಈ ವಿಷಯವನ್ನವಳೇ ತಿಳಿಸುವಳು.

ರಾಜ—(ಪುರುಷನ ಸಮೀಪಕ್ಕೆ ಬಂದು) ಸ್ವಾಮಿಯೇ ನಮಸ್ಕರಿಸುವೆನು.

ಪುರುಷ—ವತ್ಸ, ಇದು ಶಿಷ್ಟಾಚಾರಕ್ಕೆ ವಿರುದ್ಧವಾದದ್ದು. ಏಕೆಂದರೆ ನೀನು ಜ್ಞಾನವೃದ್ಧನಾದ್ದರಿಂದ ನಮ್ಮಗಳಿಗೆ ಉಪದೇಶ ಮಾಡಿ ಪಿತೃಭಾವವನ್ನು ಪಡೆದಿರುವಿ. "ಅಧ್ಯಾಪಯಾಮಾಸಪಿತೄನ್ ಶಿಶುರಾಂಗೀರಸಃಕವಿಃ ಪುತ್ರಕಾ ಇತಿ ಹೋವಾಚ ಜ್ಞಾನೇನ ಪರಿಗೃಹ್ಯತಾನ್" ಶಿಶುವಾದ ಆಂಗೀರಸನು ತಮ್ಮ ಪಿತೃಗಳನ್ನು ಜ್ಞಾನದಿಂದ ಮಕ್ಕಳೆಂದು ಪರಿಗ್ರಹಿಸಿ, ಮಕ್ಕಳುಗಳಿರಾ ಎಂದು ಸಂಬೋಧಿಸಿ ಅಧ್ಯಯನ ಮಾಡಿಸಿದನೆಂದು ಮನುಸ್ಮೃತಿಯಲ್ಲಿ ಇತರ ಸಂಬಂಧಗಳಿಗಿಂತಲೂ, ಜ್ಞಾನಸಂಬಂಧವು ದೊಡ್ಡದೆಂದು ಹೇಳಿರುವುದು. ಆದ್ದರಿಂದ ತಂದೆಯು ಮಕ್ಕಳಲ್ಲಿರುವಂತೆ ನೀನು ನಮ್ಮಲ್ಲಿ ವರ್ತಿಸಬೇಕು. ಇದೇ ಧರ್ಮವು.

ಶಾಂತಿ—ದೇವಿಯೇ, ಪುರುಷನೊಂದಿಗೆ ಸ್ವಾಮಿಯು ಏಕಾಂತಸ್ಥಳದಲ್ಲಿರುವನು. ಸಮೀಪಕ್ಕೆ ಹೋಗು.

ಉಪನಿಷದ್ದೇವಿ—(ಸಮೀಪಕ್ಕೆ ಹೋಗುವಳು.)

ಶಾಂತಿ—ಸ್ವಾಮಿಯೇ, ಪಾದವಂದನಕ್ಕೆ ಉಪನಿಷದ್ದೇವಿಯು ಬಂದಿರುವಳು.

ಪುರುಷ—ಹಾಗೆ ಹೇಳಕೂಡದು, ಇವಳು ನನಗೆ ತಾಯಿ. ಇವಳನ್ನೇ ನಾವು ನಮಸ್ಕರಿಸಬೇಕು. ಅಥವಾ ಅನುಗ್ರಹವಿಧಿಯಲ್ಲಿ ಈ ದೇವಿಗೂ, ಜನನಿಗೂ ಬಹಳ ವ್ಯತ್ಯಾಸವಿದೆ. ತಾಯಿಯು ಸಂಸಾರ ಬಂಧವನ್ನು ಹೆಚ್ಚಿಸುವಳು. ದೇವಿಯು ಸಂಸಾರಬಂಧವನ್ನು ಛೇದಿಸುವಳು. (ಉಪನಿಷದ್ದೇವಿಯು ವಿವೇಕನನ್ನು ನೋಡಿ ನಮಸ್ಕಾರಮಾಡಿ ದೂರವಾಗಿ ಕುಳಿತುಕೊಳ್ಳುವಳು.)

ಪುರುಷ—ಮಾತೆ, ಇಷ್ಟು ದಿವಸಗಳನ್ನು ನೀನು ಎಲ್ಲಿ ಕಳದೆ.

ಉಪನಿಷದ್ದೇವಿ—ಸ್ವಾಮಿ, ಮಠಗಳೂ, ನಾನಾ ಜನಗಳು ಸೇರುವ ಸ್ಥಾನಗಳೂ, ಜೀರ್ಣ ದೇವಾಲಯಗಳೂ, ಇವುಗಳಲ್ಲಿ ಮೂರ್ಖರಾಗಿಯೂ, ವಾಚಾಲರಾಗಿಯೂ, ಇರುವ ಜನಗಳೊಂದಿಗೆ ಇಷ್ಟು ದಿವಸಗಳನ್ನು ಕಳೆದೆನು.

ಪುರುಷ—ಅವರು ನಿನ್ನ ಮಹಿಮೆಯನ್ನು ಸ್ವಲ್ಪವಾದರೂ ತಿಳಿದಿರುವರೇ ಹೇಗೆ?

ಉಪನಿಷದ್ದೇವಿ—ಇಲ್ಲವೇ ಇಲ್ಲ. ಆ ಮೂರ್ಖರುಗಳು ಗುರೂಪದೇಶ ಪದ್ಧತಿಯನ್ನು ಬಿಟ್ಟು, ತಮ್ಮ ಮನಸ್ಸು ಬಂದಂತೆ ನನ್ನ ವಚನಗಳಿಗೆ ಅಸ್ಪಷ್ಟವಾಗಿ ಮಾತಾಡುವ ದ್ರಾವಿಡ ಸ್ತ್ರೀಯರ ಮಾತುಗಳಿಗೆ ಅರ್ಥವನ್ನು ಊಹಿಸುವಂತೆ ವಿಚಾರವಿಲ್ಲದೇನೆ ಅರ್ಥವನ್ನು ಕಲ್ಪಿಸುತ್ತಾರೆ. ಆದರೆ ನನ್ನ ವಚನಗಳಿಗೆ ಅರ್ಥವಿಚಾರವನ್ನು ಅವರು ಮಾಡುತ್ತಿದ್ದದ್ದು ಇತರರ ದ್ರವ್ಯವನ್ನು ಆಕರ್ಷಿಸುವುದಕ್ಕೇ ಹೊರತು ಮತ್ತೆ ಬೇರೆಯಲ್ಲ.

ಪುರುಷ—ಆಮೇಲೆ.

ಉಪದೆಷದ್ದೇವಿ—ಒಂದು ದಿವಸದಲ್ಲಿ ಕೃಷ್ಣಾಜಿನ, ಗಾರ್ಹಪತ್ಯಾದಿ ಅಗ್ನಿಗಳು, ಪಾಲಾಶಾದಿ ಸಮಿತ್ತುಗಳು, ಘೃತ, ಸೃಕ್ಕು, ಸೃವ ಮೊದಲಾದ ಪಾತ್ರೆಗಳಿಂದಲೂ, ದರ್ಶಪೂರ್ಣಮಾಸೇಷ್ಟಿ, ನಿರೂಢಪಶು, ಅಗ್ನಿಷ್ಟೋಮ, ಮೊದಲಾದ ಯಾಗಗಳಿಂದಲೂ ಕೂಡಿಕೊಂಡಿರುವ ಕರ್ಮಕಾಂಡ ಪದ್ಧತಿಗಳನ್ನು ತೋರಿಸುವ ಯಜ್ಞ ವಿದ್ಯೆಯು ದಾರಿಯಲ್ಲಿ ಕಂಡಳು. ನಾನೂ ಯೋಚನೆ ಮಾಡಿದೆನು. ಪುಸ್ತಕಗಳ ಹೊರೆಯನ್ನು ಹೊತ್ತಿರುವ ಇವಳು ನನ್ನ ತತ್ವವನ್ನು ತಿಳಿಯಬಹುದು ಹೀಗೆಂದು ಯೋಚನೆ ಮಾಡಿ ಅವಳ ಸಮೀಪದಲ್ಲಿ ಕೆಲವು ದಿವಸಗಳು ಇರಬೇಕೆಂದು ಸಂಕಲ್ಪಿಸಿದೆನು.

ಪುರುಷ—ಆಮೇಲೆ.

ಉಪನಿಷದ್ದೇವಿ—ಅವಳ ಸಮೀಪಕ್ಕೆ ಹೋದೆನು. ನಿನ್ನ ಅಭಿಪ್ರಾಯವೇನೆಂದು ಅವಳು ಕೇಳಿದಳು. "ಈಗ ನಾನು ಅನಾಥಳಾಗಿದ್ದೇನೆ. ನಿನ್ನಲ್ಲಿ ವಾಸಮಾಡಲು ಅಪೇಕ್ಷಿಸುತ್ತೇನೆ" ಎಂದು ನಾನು ಹೇಳಿದೆನು.

ಪುರುಷ—ಆಮೇಲೆ.

ಉಪನಿಷದ್ದೇವಿ—ಆಮೇಲೆ ಅವಳು ನಿನ್ನ ಕೆಲಸವೇನೆಂದು ಕೇಳಿದಳು. ಆಗ ನಾನು ಈ ಪ್ರಪಂಚದ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣವಾಗಿಯೂ, ಜಗ

ತ್ಪ್ರಕಾಶಕನಾಗಿಯೂ, ಸಹಜಾನಂದ ಸುಂದರನಾಗಿಯೂ, ವಿಕಾರಶೂನ್ಯನಾಗಿಯೂ, ಶಾಶ್ವತನಾಗಿಯೂ, ಕ್ರಿಯಾರಹಿತನಾಗಿಯೂ, ಸಂಸಾರ ನಿವೃತ್ತಿಗೋಸ್ಕರ ವಿದ್ವಾಂಸರುಗಳಿಂದ ದ್ವೈತಭಾವವನ್ನು ಬಿಟ್ಟು ಹೊಂದಲ್ಪಡತಕ್ಕವನಾಗಿಯೂ ಇರುವ ಪರಮ ಪುರುಷನನ್ನು ಸ್ತೋತ್ರಮಾಡುತ್ತೇನೆ ಎಂದು ಹೇಳಿದೆನು. ಯಜ್ಞವಿದ್ಯೆಯು ಯೋಚಿಸಿ ಕರ್ತೃತ್ವ ರಹಿತನಾದ ಪುರುಷನು ಈಶ್ವರನು ಹೇಗಾಗುವನು. ಸಂಸಾರವನ್ನು ನಾಶಮಾಡತಕ್ಕದ್ದು ಕ್ರಿಯೆಯೇ ಹೊರ್ತು ಪರಬ್ರಹ್ಮಜ್ಞಾನವಲ್ಲವು. ಮನುಷ್ಯನು ತಮ್ಮ ಜೀವಮಾನಗಳನ್ನೆಲ್ಲವನ್ನೂ ಶಾಂತಮನಸ್ಕನಾಗಿ ಸಂಸಾರ ಬಂಧವಿಮೋಚಕಗಳಾದ ಕರ್ಮಗಳನ್ನೇ ಮಾಡುತ್ತಾ ಕಳಯಬೇಕು. ಆದ್ದರಿಂದ ನಿನ್ನನ್ನು ನನ್ನಲ್ಲಿಟ್ಟುಕೊಳ್ಳುವುದರಿಂದ ಹೆಚ್ಚು ಪ್ರಯೋಜನವೇನೂ ಕಾಣುವುದಿಲ್ಲ. ಆದಾಗ್ಯೂ ಪುರುಷನನ್ನು ಕರ್ತಾ ಎಂತಲೂ, ಭೋಕ್ತಾ ಎಂತಲೂ ಸ್ತೋತ್ರಮಾಡುತ್ತಾ ಕೆಲವು ಕಾಲದವರೆಗೆ ಇಲ್ಲಿ ವಾಸಮಾಡುವುದಕ್ಕೆ ನಿನಗೆ ಇಷ್ಟವಿದ್ದರೆ ಅದರಿಂದ ನಮಗೇನೂ ದೋಷವಿಲ್ಲ ಎಂದು ಹೇಳಿದಳು.

ರಾಜ—(ನಗುತ್ತ) ಯಜ್ಞವಿದ್ಯೆಗೆ ಕಣ್ಣಿಗೆ ಹೊಗೆಯು ತುಂಬಿಕೊಂಡದ್ದರಿಂದ ಮಲಿನ ದೃಷ್ಟಿಯುಳ್ಳವಳಾಗಿ ತಿಳುವಳಿಕೆಯು ಇಲ್ಲವಾಯಿತು. ಆದ್ದರಿಂದಲೇ ಈ ಕುತರ್ಕದಿಂದ ಕೆಟ್ಟುಹೋದಳು. ಈಶ್ವರನ ಮಾಯೆಯು ಪ್ರಪಂಚವನ್ನುಂಟುಮಾಡುವಳು. ವಿಶ್ವಸಾಕ್ಷಿಯಾದ ಈಶ್ವರನ ಈಕ್ಷಣಮಾತ್ರದಿಂದ ಪ್ರೇರಿತಳಾಗಿ ಸೃಷ್ಟಿಸುವ ಮಾಯೆಗೆ ಸೃಷ್ಟಿಕರ್ತೃತ್ವವೇ ಹೊರತು, ಈಶ್ವರನಿಗೆ ಕರ್ತೃತ್ವವೆಲ್ಲಿಯದು? ಈ ಮಾಯೆಯೂ ಅಚೇತನಳಾದಾಗ್ಯೂ ಅಚೇತನವಾದ ಕಬ್ಬಿಣವು ಕಾಂತದ ಸಾನ್ನಿಧ್ಯವುಂಟಾದರೆ ಚೇತನ ಧರ್ಮವಾದ ಚಲನವನ್ನು ಹೊಂದುವಂತೆಯೇ ಸೃಷ್ಟಿರೂಪವಾದ ಕರ್ಮವನ್ನು ಮಾಡುವುದಕ್ಕೆ ಸಮರ್ಥಳಾಗಿದ್ದಾಳೆ. ಇದೇ ಈಶ್ವರನ ಈಶ್ವರತ್ವವು. ಆದ್ದರಿಂದಲೇ ತಮೋಂಧರಾದವರಿಗೆ ದೃಷ್ಟಿಯು ಹೀಗೆಯೇ ಆಗುವುದು. ಅಜ್ಞಾನದಿಂದ ಉಂಟಾದ ಸಂಸಾರವನ್ನು ಕರ್ಮಗಳಿಂದ ಹೋಗಲಾಡಿಸುವ ಈ ಯಜ್ಞವಿದ್ಯೆಯು ಕತ್ತಲೆಯನ್ನು ಕತ್ತಲೆಯಿಂದಲೇ

ಪರಿಹರಿಸಲಪೇಕ್ಷಿಸುವಳು. ಆತ್ಮಜ್ಞಾನದಿಂದ ಆವಿರ್ಭವಿಸಿದ ಈ ಪ್ರಪಂಚವು ಆತ್ಮಜ್ಞಾನದಿಂದಲೇ ನಷ್ಟವಾಗುವುದು. ಶಾಸ್ತ್ರದಲ್ಲಿ ಜ್ಞಾನಾಜ್ಞಾನಗಳಿಗೆ ಬಾಧ್ಯ ಬಾಧಕಭಾವವು ದೃಷ್ಟವಾಗಿದೆಯಲ್ಲದೆ ಕರ್ಮಜ್ಞಾನಗಳಿಗೆ ಬಾಧ್ಯ ಬಾಧಕ ಭಾವವು ದೃಷ್ಟವಾಗಿಲ್ಲ. ಆದ್ದರಿಂದ ಸ್ವಭಾವದಿಂದಲೇ ನಶ್ವರಗಳಾದ ಈ ಸಪ್ತ ಭುವನಗಳನ್ನು ಪ್ರಕಾಶಗೊಳಿಸುವ ಸ್ವಪ್ರಕಾಶನಾದ ಪುರುಷನನ್ನು ಅರಿತ ವಿದ್ವಾಂಸನು ಅಂಥಾ ಪರಬ್ರಹ್ಮನನ್ನು ಹೊಂದುವನು. ಇದು ಹೊರತು ಸಂಸಾರ ಮೋಕ್ಷಕ್ಕೆ ಬೇರೇ ಉಪಾಯವೇ ಇಲ್ಲ.

ಪುರುಷ—ಆಮೇಲೆ.

ಉಪನಿಷದ್ದೇವಿ—ಅನಂತರದಲ್ಲಿ ಯಜ್ಞವಿದ್ಯೆಯು ಹಾಗೆಯೇ ವಿಚಾರ ಮಾಡಿ, ಸಖಿಯೇ, ನೀನು ನಮ್ಮಲ್ಲಿದ್ದರೆ ನಮ್ಮ ಶಿಷ್ಯರುಗಳು ದುರ್ಬುದ್ಧಿಗ್ರಸ್ತರಾಗಿ ಕರ್ಮಗಳನ್ನು ಮಾಡುವುದರಲ್ಲಿ ಪ್ರೀತಿಯಿಲ್ಲದವರಾಗುತ್ತಾರೆ. ಆದ್ದರಿಂದ ನೀನು ಕೃಪೆಮಾಡಿ ಇನ್ಯಾವ ದೇಶಕ್ಕಾದರೂ ಹೊರಟುಹೋಗಬಹುದು.

ಪುರುಷ—ಆಮೇಲೆ.

ಉಪನಿಷದ್ದೇವಿ—ಆಮೇಲೆ ನಾನು ಅವಳನ್ನು ಬಿಟ್ಟು ಮುಂದೆ ಹೋದೆ. ಅಲ್ಲಿ ಕರ್ಮಕಾಂಡ ಸಹಚರಿಯಾದ ಮೀಮಾಂಸೆಯನ್ನು ನೋಡಿದೆನು. ಈ ಮೀಮಾಂಸೆಯು ಕರ್ಮಫಲಾನುರೂಪವಾಗಿ ಜ್ಯೋತಿಷ್ಟೋಮಾದಿ ಕರ್ಮಗಳನ್ನು ವಿಭಾಗಮಾಡಿ ಉಪದಿಷ್ಟಗಳಾಗಿಯೂ, ಅತಿದಿಷ್ಟಗಳಾಗಿಯೂ, ಇರುವ ನಾನಾ ಭೇದಗಳಿಂದ ಕೂಡಿದ ಪ್ರಯಾಜಾಯಾಜಾದಿ ಅಂಗಗಳಿಂದ ಸೇರಿಸುತ್ತಿದ್ದಳು. ಅವಳನ್ನೂ ನಾನು ಕೇಳಿಕೊಂಡೆನು. ನಿನ್ನ ಕೆಲಸವೇನೆಂದವಳೂ ಕೇಳಿದಳು. ಯಜ್ಞವಿದ್ಯೆಗೆ ಹೇಳಿದಂತೆಯೇ ಇವಳಿಗೂ ಹೇಳಿದೆನು.

ಪುರುಷ—ಆಮೇಲೆ.

ಉಪನಿಷದ್ದೇವಿ—ಮೀಮಾಂಸೆಯು ಪಕ್ಕದಲ್ಲಿದ್ದವರ ಮುಖವನ್ನು ನೋಡಿ ಲೋಕಾಂತರದ ಫಲೋಪಭೋಗಕ್ಕೆ ಯೋಗ್ಯನಾದ ಪುರುಷನನ್ನು ಪ್ರತಿ

ಪಾದನೆ ಮಾಡುವುದರಿಂದ ಇವಳಿಂದ ನಮಗೆ ಪ್ರಯೋಜನವಿದೆ. ಆದ್ದರಿಂದ ಇವಳು ನಮ್ಮಲ್ಲಿರಲಿ ಎಂದು ಹೇಳಿದಳು. ಅವರೊಳಗೆ ಒಬ್ಬ ಶಿಷ್ಯನು ಅದನ್ನು ಅನುಮೋದಿಸಿದನು. ಪ್ರಸಿದ್ಧ ಪ್ರತಿಷ್ಠನಾದ ಮೀಮಾಂಸಾಹೃದಯಾಧಿದೈವತನಾದ ಕುಮಾರಿಲ ಸ್ವಾಮಿಯೆಂಬ ಮತ್ತೊಬ್ಬ ಶಿಷ್ಯನು "ದೇವಿಯೇ, ಇವಳು ಕರ್ಮೋಪಯುಕ್ತನಾದ ಪುರುಷನನ್ನು ಪ್ರತಿಪಾದಿಸುವುದಿಲ್ಲ. ಕರ್ತನೂ, ಭೋಕ್ತನೂ ಅಲ್ಲದ ಈಶ್ವರನನ್ನು ಹೇಳುವಳು. ಆದ್ದರಿಂದ ಇವಳಿಂದ ಉಪಯೋಗನೇನೂ ಕಾಣಿಸುವುದಿಲ್ಲ. ಮತ್ತೊಬ್ಬ ಶಿಷ್ಯನು "ಲೋಕಪ್ರಸಿದ್ಧನಾದ ಜೀವನಿಗಿಂತಲೂ ಈಶ್ವರನೊಬ್ಬನು ಬೇರೆ ಎಲ್ಲಿರುವನು" ಎಂದನು. ಅದಕ್ಕೆ ಕುಮಾರಿಲ ಸ್ವಾಮಿಯು ನಕ್ಕು, ಪುನಃ ಹೇಳಿದನು. "ಇದಾನೆ. ಒಬ್ಬ ಪುರುಷನು ಪ್ರಪಂಚದ ಸಮಸ್ತ ವ್ಯಾಪಾರಗಳನ್ನೂ ನೋಡುತ್ತಿರುವನು. ಇನ್ನೊಬ್ಬ ಪುರುಷನು (ಜೀವನು) ಮೋಹದಿಂದ ಆವರಿಸಿದ ಜ್ಞಾನವುಳ್ಳವನಾಗಿರುವನು. ಒಬ್ಬ ಪುರುಷನು (ಜೀವನು) ಕರ್ಮಫಲಗಳನ್ನು ಅಪೇಕ್ಷಿಸುವನು. ಮತ್ತೊಬ್ಬನು (ಈಶ್ವರನು) ಕೇಳುವವನಿಗೆ ಕೊಡುವನು. ಒಬ್ಬನು (ಜೀವನು) ಜ್ಯೋತಿಷ್ಟೋಮಾದಿ ಕರ್ಮಗಳಲ್ಲಿ ನೇಮಿಸಲ್ಪಡುವನು. ಮತ್ತೊಬ್ಬನು (ಈಶ್ವರನು) ಪ್ರಾಣಿಗಳಿಗೆ ಶಾಸಕನು. ಹೀಗೆ ಲೋಕಪ್ರಸಿದ್ಧನಾದ ಜೀವನಿಗಿಂತಲೂ ವಿಲಕ್ಷಣನಾದ ಈಶ್ವರನು ನಿಸ್ಸಂಗನಾದದ್ದರಿಂದ ಕರ್ತನೆಂದು ಹೇಳುವುದಕ್ಕೆ ಹೇಗಾಗುವುದು.

ರಾಜ—(ಸಂತೋಷದಿಂದ) ಎಲೈ ತಾಂತ್ರಿಕ ಕುಮಾರಿಲ ಸ್ವಾಮಿಯೇ ನಿನ್ನ ಪ್ರಜ್ಞೆಯು ಶ್ಲಾಘನೀಯವಾಗಿರುವುದು. ಆಯುಷ್ಮಂತನಾಗು. ಪರಸ್ಪರಾನುರಾಗತರಾದ ಅವ್ಯಾಹತ ಜ್ಞಾನವುಳ್ಳ ಜೀವಾತ್ಮ-ಪರಮಾತ್ಮರುಗಳು ಎರಡು ಪಕ್ಷಿಗಳು ಒಂದು ಮರವನ್ನಾಶ್ರಯಿಸಿದಂತೆ, ಈ ಶರೀರವನ್ನು ಆಶ್ರಯಿಸಿರುವರು. ಅವರೊಳಗೆ ಜೀವಾತ್ಮನು ಪಕ್ಷಿಯು ಆ ಮರದ ಫಲವನ್ನು ಅನುಭವಿಸುವಂತೆ ಶರೀರದ ಕರ್ಮಫಲವನ್ನನುಭವಿಸುವನು. ಪರಮಾತ್ಮನು ಅದರ ಭೋಗವಿಲ್ಲದೇನೇ ಸಾಕ್ಷಿಯಾಗಿ ಪ್ರಕಾಶಿಸುತ್ತಿರುವನು.

ಪುರುಷ—ಆಮೇಲೆ.

ಉಪನಿಷದ್ದೇವಿ—ನಾನು ಮೀಮಾಂಸೆಯನ್ನು ಬಿಟ್ಟು ಮುಂದಕ್ಕೆ ಹೋದೆನು. ಮುಂದೆ ಅನೇಕ ಶಿಷ್ಯರುಗಳಿಂದ ಸೇವಿಸಲ್ಪಡುತ್ತಿರುವ ತರ್ಕವಿದ್ಯೆಗಳನ್ನು ನೋಡಿದೆನು. ಅದರಲ್ಲಿ ಪತಂಜಲಿ ನಿರ್ಮಿತಳಾದ ವಿದ್ಯೆಯೊಬ್ಬಳು ಆತ್ಮನು ನಿರ್ಲೇಪನು, ಕ್ಲೇಶಗಳ ಸಂಬಂಧವಿಲ್ಲದವನು, ಪ್ರಪಂಚಕ್ಕೆ ಬೇರೆಯಾದವನು, ಕರ್ತನೂ ಅಲ್ಲ, ಭೋಕ್ತನೂ ಅಲ್ಲ, ಎಂದು ಪ್ರತಿಪಾದಿಸುತ್ತಿದ್ದಳು. ಗೌತಮ ಪ್ರಣೀತಳಾದ ನ್ಯಾಯವಿದ್ಯೆಯು ಪಂಚಾವಯವಗಳುಳ್ಳ ಅನುಮಾನ ವಾಕ್ಯಗಳಿಂದಲೂ, ಒಂದು ಅರ್ಥದಲ್ಲಿ ಉಪಯುಕ್ತವಾದ ಶಬ್ದಕ್ಕೆ ಬೇರೇ ಅರ್ಥವನ್ನು ವರ್ಣಿಸುವುದರಿಂದಲೂ, ಅಸದುತ್ತರಗಳಿಂದಲೂ, ಇತರರ ಅಹಂಕಾರ ನಿರಾಕರಣಗಳೆಂಬ ನಿಗ್ರಹಗಳಿಂದಲೂ, ಕೂಡಿದ ನ್ಯಾಯಗಳಿಂದ ಜಲ್ಪವನ್ನೂ, ವಿತಂಡಾವಾದವನ್ನೂ ವಿಸ್ತರಿಸುತ್ತಿದ್ದಳು. ಸಾಂಖ್ಯನಿರ್ಮಿತಳಾದ ಮತ್ತೊಬ್ಬಳು ಗುಣತ್ರಯ ಸಾಮ್ಯಾವಸ್ಥೆಯುಳ್ಳ ಪ್ರಕೃತಿಯನ್ನು ಜಗತ್ಕಾರಣಭೂತಳನ್ನಾಗಿ ವಿವರಿಸುತ್ತಾ, ಮಹತ್ತು, ಅದರಿಂದ ಅಹಂಕಾರ, ಅದರಿಂದ ಪಂಚತನ್ಮಾತ್ರೆಗಳು ಹೀಗೆ 25 ತತ್ವಗಳ ವರೆಗೂ ಗಣಿಸುವುದರಲ್ಲಿಯೇ ನಿರತಳಾಗಿದ್ದಳು.

ಪುರುಷ—ಆಮೇಲೆ.

ಉಪನಿಷದ್ದೇವಿ—ಹಾಗೆಯೇ ನಾನು ಅವರುಗಳ ಸಮೀಪಕ್ಕೆ ಹೋದೆನು. ನಿನ್ನ ಕೆಲಸವೇನೆಂದು ಅವರು ಕೇಳಲಾಗಿ, ಹಿಂದೆ ಹೇಳಿದಂತೆಯೇ ಅವರುಗಳಲ್ಲಿಯೂ ನನ್ನ ಕೆಲಸವನ್ನು ತಿಳಿಸಿದೆನು. ಅವರು ಘಟ್ಟಿಯಾಗಿ ನಗುತ್ತಾ ಅಹಾ! ವಾಚಾಳಿಯೇ, ಪರಮಾಣುಗಳಿಂದ ಪ್ರಪಂಚವು ಹುಟ್ಟುತ್ತದೆ. ಈಶ್ವರನು ನಿಮಿತ್ತಕಾರಣನು ಎಂದು ಹೇಳಿದರು. ಅದರಲ್ಲಿ ಒಬ್ಬಳು ಅಯ್ಯೋ ಪಾಪಿಷ್ಠಳೇ, ಬ್ರಹ್ಮವನ್ನು ಪ್ರಪಂಚಕ್ಕೆ ಉಪಾದಾನ ಕಾರಣವೆಂದು ಹೇಳುವ ನೀನು ಮಣ್ಣಿನಿಂದ ಘಟಶರಾವಾದಿಗಳು ಉಂಟಾಗುವುದರಿಂದ, ವಿಕಾರಗಳಾದ ಘಟಶರಾವಗಳಿಗೆ ಉಪಾದಾನಕಾರಣವಾದ ಮಣ್ಣಿಗೆ ವಿಕಾರತ್ವವು ಉಂಟಾಗಿ, ನಶ್ವರವಾಗುವಂತೆ ಬ್ರಹ್ಮಕ್ಕೂ ವಿಕಾರಿತ್ವವೂ,

ನಶ್ವರತ್ವವೂ ಉಂಟಾಗುವುದನ್ನು ತಿಳಿದುಕೊಳ್ಳದೆ ಹೋದೆಯಲ್ಲಾ ! ಪ್ರಕೃತಿಯಿಂದಲೇ ವಿಶ್ವೋತ್ಪತ್ತಿಯಾಗಬೇಕು ಎಂದು ಹೇಳಿದಳು.

ರಾಜ—ದುರ್ಬುದ್ಧಿಗಳಾದ ತರ್ಕವಿದ್ಯೆಗಳು ಇಷ್ಟನ್ನೂ ತಿಳಿಯಲಾರದೇ ಹೋದವು. ಪ್ರಮೇಯಗಳೆಲ್ಲವೂ ಘಟಾದಿಗಳಂತೆ ಕಾರ್ಯಗಳು. ಉಪಾದಾನ ಕಾರಣವನ್ನು ಹುಡುಕಿದರೆ, ಬೇರೆ ಯಾವುದೂ ಇಲ್ಲದ್ದರಿಂದ ಆತ್ಮವೇ ಉಪಾದಾನಕಾರಣವಾಗುವುದು. ಆದ್ದರಿಂದ ಪರಮಾಣುಗಳಿಗೂ, ಪ್ರಕೃತಿಗೂ, ಉಪಾದಾನ ಕಾರಣತ್ವವು ಉಪೇಕ್ಷೆಗೆ ವಿಷಯವಾಗಿರುವುದು. ಹೇಗಂದರೆ, ಕಣ್ಣಿಗೆ ಕಾಣುವ ಜಗತ್ತೆಲ್ಲವೂ ಕಾರ್ಯವು. ಆದ್ದರಿಂದಲೇ ಅಸತ್ಯವು, ಜಲದಲ್ಲಿ ಚಂದ್ರನೂ, ಅಂತರಿಕ್ಷದಲ್ಲಿ ನಗರವೂ, ಸ್ವಪ್ನದಲ್ಲಿ ಪದಾರ್ಥಗಳೂ, ಇಂದ್ರಜಾಲದಲ್ಲಿ ಒಂದು ವಿಧವಾಗಿ ಇದ್ದದ್ದು ಇನ್ನೊಂದು ವಿಧವಾಗಿ ಕಾಣುವುದೂ ಇವುಗಳು ಹೇಗೆ ಅಸತ್ಯಗಳೋ, ಅಜ್ಞಾನದಿಂದ ಕಾಣುತ್ತನೆಯೋ ಹಾಗೆ ಈ ಜಗತ್ತು ಕಾಣುವುದು. ಮುತ್ತಿನ ಚಿಪ್ಪಿನಲ್ಲಿ ಬೆಳ್ಳಿಯ ಭ್ರಮೆವೂ, ಹಗ್ಗದಲ್ಲಿ ಹಾವಿನ ಭ್ರಮವೂ ತೋರುವುದು. ಹಾಗೆಯೇ ತತ್ವಾವಬೋಧ ಉಂಟಾದರೆ, ಈ ಭ್ರಾಂತಿಯುಲ್ಲವೂ ಅಡಗಿಹೋಗುವುದು. ಅದರಂತೆ ಪರಮಾತ್ಮಜ್ಞಾನ ಉಂಟಾದರೆ, ಅಜ್ಞಾನದಿಂದ ಕಾಣುವ ಜಗತ್ತು ಲೀನವಾಗಿ ಹೋಗುವುದು. ನಿರ್ವಿಕಾರವಾಗಿಯೂ, ನಿರ್ಮಲವಾಗಿಯೂ, ಅಜ್ಞಾನ ಶೂನ್ಯವಾಗಿಯೂ ಇರುವ ಬ್ರಹ್ಮ ತೇಜಸ್ಸು ವಿಶ್ವೋತ್ಪತ್ತಿಯಲ್ಲಿ ವಿಕಾರವನ್ನು ಹೇಗೆತಾನೆ ಹೊಂದುವುದು ? ಕನ್ನೈದಿಲೆ ಹೂವುಗಳ ದಳಗಳಂತೆ ಕಪ್ಪಾಗಿರುವ ಮೇಘಗಳು ಆವಿರ್ಭವಿಸುವುದರಿಂದ ಆಕಾಶಕ್ಕೆ ವಿಕಾರ ಉಂಟಾಗುವುದೇ ?

ಪುರುಷ—ಆಹಾ ! ಈ ವಿಚಾರವು ನನಗೆ ಬಹಳ ಸಂತೋಷವನ್ನುಂಟುಮಾಡುತ್ತಿದೆ. (ಉಪನಿಷದ್ದೇವಿಯನ್ನು ಕುರಿತು) ಆಮೇಲೆ.

ಉಪನಿಷದ್ದೇವಿ—ಆಮೇಲೆ ಅವರೆಲ್ಲರೂ ಕೋಪಗೊಂಡು, ಪ್ರಪಂಚಲಯದಿಂದ ಮುಕ್ತಿಯನ್ನು ಹೇಳುವ ಇವಳು ನಾಸ್ತಿಕರ ದಾರಿಯನ್ನು ಹಿಡಿದಿರುವಳು. ಹಿಡಿಯಿರಿ. ಇವಳನ್ನು ಬಿಡಬೇಡಿರಿ, ಎಂದು ನನ್ನನ್ನು ನಿಗ್ರಹಿಸುವುದಕ್ಕೆ ಆರಂಭಿಸಿದರು.

ಪುರುಷ—(ಭಯದಿಂದ) ಆಮೇಲೆ.

ಉಪನಿಷದ್ದೇವಿ—ಅನಂತರದಲ್ಲಿ ನಾನು ಬಹು ಜಾಗ್ರತೆಯಾಗಿ ಓಡಿ ದಂಡಕಾರಣ್ಯಕ್ಕೆ ಪ್ರವೇಶ ಮಾಡಿದೆನು. ಅನಂತರದಲ್ಲಿ ಮಂದರ ಪರ್ವತದ ಮಧುಸೂದನ ಮಂದಿರದ ಸಮೀಪದಲ್ಲಿ ಅವರು ನನ್ನನ್ನು ತೋಳುಗಳಲ್ಲಿ ಹಿಡಿದೆಳೆದು ಬಳೆಗಳಲ್ಲಿದ್ದ ರತ್ನಗಳೆಲ್ಲವೂ ಕಳಚಿಹೋದವು. ತಲೆಯಲ್ಲಿರುವ ಚೂಡಾರತ್ನವನ್ನು ಹಿಡಿದು ತೆಗೆದುಕೊಳ್ಳುವುದಕ್ಕೆ ಆರಂಭಿಸಿ, ಕೂದಲುಗಳೆಲ್ಲವೂ ಕೆದರಿಹೋದವು. ಮುತ್ತಿನ ಸರವನ್ನು ಕಿತ್ತುಹಾಕಿಬಿಟ್ಟರು. ಶರೀರದಿಂದ ದುಕೂಲವು ಜಾರಿತು.

ಪುರುಷ—ಆಮೇಲೆ

ಉಪನಿಷದ್ದೇವಿ—ಆಮೇಲೆ ದೇವಮಂದಿರದಿಂದ ಗದಾಪಾಣಿಗಳಾಗಿ ಕೆಲವು ಪುರುಷರುಗಳು ಬಂದು, ಅವರುಗಳನ್ನು ಹೊಡೆದು ಓಡಿಸಿದರು. ಆಗ ಅವರುಗಳೆಲ್ಲರೂ ಹೆದರಿ ದಿಕ್ಕುದಿಕ್ಕಿಗೆ ಓಡಿಹೋದರು.

ರಾಜ—(ಸಂತೋಷದಿಂದ) ವಿಶ್ವಸಾಕ್ಷಿಯಾದ ಭಗವಂತನು ನಿನ್ನನ್ನು ಇತರರು ಆಕ್ರಮಿಸಿದರೆ ಸಹಿಸುವನೇ ?

ಪುರುಷ—ಆಮೇಲೆ.

ಉಪನಿಷದ್ದೇವಿ—ನಾನು ಹೆದರಿಕೆಯಿಂದ ಕಾಲಂದಿಗೆ ಜಾರಿಬೀಳುವುದನ್ನೂ ಕಾಣದೆ, ಗೀತಾಶ್ರಮಕ್ಕೆ ಹೋದೆನು. ಅಲ್ಲಿ ವತ್ಸೆಯಾದ ಗೀತೆಯು ಅಲ್ಲಿಗೆ ಬಂದ ನನ್ನನ್ನು ನೋಡಿ, ಸಡಗರದಿಂದ ಜನನೀ ! ಜನನೀ ! ಎಂದು ಆಲಿಂಗಿಸಿಕೊಂಡು, ಕೂರಿಸಿಕೊಂಡಳು. ನನ್ನ ಸಮಾಚಾರವನ್ನೆಲ್ಲವನ್ನೂ ಕೇಳಿ, ಜನನಿಯೇ, ಇದಕ್ಕೆ ನೀನು ದುಃಖಪಡಬೇಡ. ನಿನ್ನನ್ನು ನಂಬದೆ ರಾಕ್ಷಸ ಪ್ರಕೃತಿಗಳಾದ ಯಾವ ಜನಗಳು ಸ್ವೇಚ್ಛೆಯಾಗಿ ಪ್ರವರ್ತಿಸುತ್ತಾರೆಯೋ ಅವರುಗಳನ್ನು ಈಶ್ವರನೇ ಶಿಕ್ಷಿಸುವನು. ಭಗವಂತನು ಅವರುಗಳನ್ನು ಉದ್ದೇಶಿಸಿ ಗೀತೆಯಲ್ಲಿ—

ಶ್ಲೋ॥ ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ ।
ಕ್ಷಿಪಾಮ್ಯಜಸ್ರ ಮಶುಭಾನಾಸುರೀಷ್ವೇವಯೋನಿಷು ॥

ಅಶುಭರಾಗಿ, ಕ್ರೂರರಾಗಿ ದ್ವೇಷಿಸುವ ಆ ನರಾಧಮರುಗಳನ್ನು ಸಂಸಾರ ದಲ್ಲಿ ಅಸುರಜನ್ಮದಲ್ಲಿಯೇ ಯಾವಾಗಲೂ ಹಾಕುತ್ತೇನೆಂದು ಹೇಳಿರು ವನು.

ಪುರುಷ—(ಕುತೂಹಲದಿಂದ) ದೇವಿಯೇ, ನಿನ್ನ ಅನುಗ್ರಹದಿಂದ ಈಶ್ವರನೆಂಬು ವನು ಯಾರೆಂಬುದನ್ನು ತಿಳಿಯಲಪೇಕ್ಷಿಸುತ್ತೇನೆ.

ಉಪನಿಷದ್ದೇವಿ—ಕೋಪಗೊಂಡಂತೆ ಸ್ವಸ್ವರೂಪವನ್ನೇ ಅರಿಯದ ಮನುಷ್ಯನಿಗೆ ಯಾರು ಉತ್ತರವನ್ನು ಕೊಡುವರು ?

ಪುರುಷ—ಬಹಳ ಸಂತೋಷದಿಂದ, ಹಾಗಾದರೆ ಈ ಆತ್ಮನೇ ಪರಮೇಶ್ವರನೇ ?

ಉಪನಿಷದ್ದೇವಿ—ಹೌದು. ಆ ಪರಮಾತ್ಮನು ನಿನಗಿಂತಲೂ ಬೇರೆಯಾದವನಲ್ಲ. ನೀನು ಆ ಪುರುಷೋತ್ತಮನಿಗಿಂತಲೂ ಬೇರೆ ಇಲ್ಲ. ಆ ಪುರುಷೋತ್ತ ಮನೇ ಅನಾದಿಯಾದ ಮಾಯೆಯಿಂದ ನೀರಿನಲ್ಲಿ ಸೂರ್ಯನ ಬಿಂಬವು ಕಾಣು ವಂತೆ ನಿನ್ನ ರೂಪವಾಗಿ ಕಾಣುವನು.

ಪುರುಷ—ವಿವೇಕನನ್ನು ನೋಡಿ, ಪೂಜ್ಯನೇ, ಭಗವತಿಯು ಹೇಳಿದ ಅರ್ಥವನ್ನು ಚೆನ್ನಾಗಿ ನಾನು ತಿಳಿದುಕೊಳ್ಳಲಾರೆ. ವ್ಯಾಪ್ಯನಾಗಿಯೂ, ಭಿನ್ನನಾ ಗಿಯೂ, ಜರಾಮರಣಗಳಿಂದ ಕೂಡಿದವನಾಗಿಯೂ ಇರುವ ನನ್ನನ್ನು ಈ ದೇವಿಯು ನಿತ್ಯಸುಖಜ್ಞಾನಸ್ವರೂಪನೆಂದು ಹೇಳುತ್ತಾಳೆ. ಇದು ಹೇಗೆ ಸಂಭವ !

ವಿವೇಕ—ಪದಾರ್ಥವು ತಿಳಿಯದೇ ಹೋದದ್ದರಿಂದ ವಾಕ್ಯಾರ್ಥಜ್ಞಾನವಾಗು ವುದಿಲ್ಲ.

ಪುರುಷ—ಅದು ಹೇಗೆ ತಿಳಿಸು ?

ವಿವೇಕ—ಕೇಳು, ಅಂತಃಕರಣದೊಂದಿಗೆ ಕೂಡಿದ "ಏಷೋಽಸ್ಮಿ" ಎಂಬ ಅಹಂ ಪ್ರತ್ಯಯದಲ್ಲಿ ಇದು ಅತಃಕರಣಾಂಶ, ಇದು ಆತ್ಮಾಂಶ, ಎಂದು ಪರಿ ಶೋಧಿಸಿ, ಅನಂತರದಲ್ಲಿ ಪಂಚೀಕೃತಗಳಾದ ಪಂಚಭೂತಗಳಿಂದ ಉಂಟಾದ ಸ್ಥೂಲತತ್ವಗಳನ್ನು ಪರಿಶೀಲಿಸುತ್ತಾ, ಅವುಗಳನ್ನು ಸೂಕ್ಷ್ಮಾವಸ್ಥೆಗಳಲ್ಲಿ ಲಯಮಾಡುತ್ತಾ ಬಂದರೆ, ಅನಂತರದಲ್ಲಿ ಜ್ಞಾನಸ್ವರೂಪನಾದ ಜೀವಾತ್ಮನು

ಉಳಿಯುವನು. ಹೀಗೆ "ತ್ವಂ" ಪದದ ಅರ್ಥವನ್ನು ತಿಳಿದು 'ತತ್ವಮಸಿ' ಎಂಬ ವಾಕ್ಯವನ್ನು ಕೇಳಿದ ನಂತರ ಸಂಸಾರಾಜ್ಞಾನವೆಲ್ಲವೂ ನಿವೃತ್ತ ವಾಗಿ ಸ್ವಯಂಪ್ರಕಾಶವಾಗಿಯೂ, ಶಾಂತವಾಗಿಯೂ, ತೇಜೋರೂಪವಾ ಗಿಯೂ ಇರುವ ಬ್ರಹ್ಮಸ್ವರೂಪದಿಂದ ಆತ್ಮನು ಪ್ರಕಾಶಿಸುತ್ತಾನೆ.

ಪುರುಷ—ಸಂತೋಷದಿಂದ, ಕೇಳಿದ ಅರ್ಥವನ್ನು ಮನಸ್ಸಿನಲ್ಲಿ ಧ್ಯಾನಮಾಡು ವನು. ಅನಂತರದಲ್ಲಿ ನಿದಿಧ್ಯಾಸನನು ಪ್ರವೇಶಿಸುವನು.

ನಿದಿಧ್ಯಾಸನ—ಭಗವತಿಯಾದ ವಿಷ್ಣುಭಕ್ತಿಯು ಉಪನಿಷದ್ದೇವಿಗೂ, ವಿವೇಕ ನಿಗೂ ಕೂಡ ರಹಸ್ಯವಾಗಿ ನನ್ನ ಅಭಿಪ್ರಾಯವನ್ನು ತಿಳಿಸಬೇಕಲ್ಲದೆ, ನೀನು ಪುರುಷನಲ್ಲಿ ವಾಸಿಸುತ್ತಿರು ಎಂದು ಅಪ್ಪಣೆ ಮಾಡಿರುವಳು. ಇಲ್ಲಿ ಉಪನಿ ಷದ್ದೇವಿಯೂ, ವಿವೇಕನೂ, ಪುರುಷನೂ ಸಹ ಇರುವರು. ಸಮಾಪಕ್ಕೆ ಹೋಗುವೆನು ಎಂದು (ಸಮಾಪಕ್ಕೆ ಬಂದು ಉಪನಿಷದ್ದೇವಿಯನ್ನು ಕುರಿತು) ದೇವಿಯೇ! ದೇವತೆಗಳು ಸಂಕಲ್ಪದಿಂದಲೇ ಉತ್ಪತ್ತಿಕಾರಣರಾಗುವರು. ನೀನು ಗರ್ಭವತಿಯಾಗಿರುವೆಯೆಂದು ಸಮಾಧಾನದಿಂದ ನನಗೆ ತಿಳಿದು ಬಂದಿದೆ. ಅದರಲ್ಲಿ ಕ್ರೂರಸ್ವಭಾವವುಳ್ಳ ವಿದ್ಯೆಯೆಂಬ ಕನ್ಯೆಯು ನಿನ್ನ ಉದರದಲ್ಲಿ ಇದಾಳೆ. ಪ್ರಬೋಧಚಂದ್ರನೂ ಇದಾನೆ. ಅವರುಗಳಿಗೆ ವಿದ್ಯೆ ಯನ್ನು ಸಂಕರ್ಷಣ ವಿದ್ಯೆಯಿಂದ ಮನಸ್ಸಿನಲ್ಲಿ ಸೇರಿಸುವಿ. ಪ್ರಬೋಧ ಚಂದ್ರನನ್ನು ಪುರುಷನಲ್ಲಿ ಸಮರ್ಪಿಸಿ, ನೀನು ವಿವೇಕನೊಂದಿಗೆ ನನ್ನ ಸಮಾ ಪಕ್ಕೆ ಬರಬೇಕು ಎಂದು ವಿಷ್ಣುಭಕ್ತಿಯು ಅಪ್ಪಣೆ ಮಾಡಿರುವಳು.

ಉಪನಿಷದ್ದೇವಿ—ದೇವಿಯ ಅಪ್ಪಣೆಯಂತೆ (ಎಂದು ವಿವೇಕನನ್ನು ಕರೆದು ಕೊಂಡು ಹೊರಟು ಹೋಗುವಳು.)

(ನಿದಿಧ್ಯಾಸನನೂ ಪುರುಷನೂ ಪ್ರವೇಶಿಸುವರು.)

ಪುರುಷ—(ಧ್ಯಾನಿಸುವನು.)

(ತೆರೆಯಲ್ಲಿ) ಆಶ್ಚರ್ಯ! ಆಶ್ಚರ್ಯ! ಹಗ್ಗದಂತೆ ದೀರ್ಘವಾದ ಕಾಂತಿಗ ಳಿಂದ ಮಿಂಚಿನಂತೆ ದಿಕ್ಕುಗಳನ್ನು ಬೆಳಗುತ್ತ ಹೃದಯ ಪುಂಡರೀಕವನ್ನು ಭೇದಿಸಿಕೊಂಡು ಈ ವಿದ್ಯಾ ಕನ್ಯೆಯು ಶೀಘ್ರವಾಗಿ ಮೋಹವನ್ನು ಗ್ರಾಸ

ಮಾಡಿ ಅಂತರ್ಧಾನವನ್ನು ಹೊಂದುತ್ತಾ ಇದಾಳೆ. ಪ್ರಬೋಧೋದ
ಯನು ಪುರುಷನ ಸಮೀಪಕ್ಕೆ ಹೋಗುತ್ತಲಿದಾನೆ.

(ಪ್ರಬೋಧೋದಯನು ಪ್ರವೇಶಿಸುವನು.)

ಪ್ರಬೋಧೋದಯ—ನಾನು ಸಮೀಪಸ್ಥನಾದರೆ ಈ ಮೂರು ಲೋಕವೂ ಪರಿ
ಪೂರ್ಣ ಬ್ರಹ್ಮಾಕಾರವೃತ್ತಿಯಿಂದ ಬಾಧಿಸಲ್ಪಟ್ಟದ್ದಾಗಿ ಉತ್ಪನ್ನವಾಯಿ
ತೆಂತಾಗಲೀ, ನಷ್ಟವಾಯಿತೆಂತಲಾಗಲಿ, ಪ್ರಕಾಶವಾಯಿತೆಂತಲಾಗಲಿ, ಲೀನ
ವಾಯಿತೆಂತಲಾಗಲೀ, ಪ್ರಾಪ್ತವಾಯಿತೆಂತಲಾಗಲೀ, ಬಾಧಿತವಾಯಿತೆಂತ
ಲಾಗಲೀ, ಸತ್ ಎಂತಲಾಗಲೀ, ಅಸತ್ ಎಂತಲಾಗಲೀ ಸಂದೇಹವೇ
ಹುಟ್ಟುವುದಿಲ್ಲ. ಇದೋ ಪುರುಷನಿಲ್ಲಿರುವನು. (ಎಂದು ಪುರುಷನ
ಸಮೀಪಕ್ಕೆ ಬಂದು) ಭಗವನ್, ಪ್ರಬೋಧಚಂದ್ರೋದಯನಾದ ನಾನು
ನಮಸ್ಕರಿಸುತ್ತೇನೆ.

ಪುರುಷ—(ಆನಂದದಿಂದ) ಪುತ್ರನೇ ಬಾ. ಆಲಿಂಗಿಸಿಕೋ. ಆಹಾ! ಕತ್ತಲೆ
ಯಲ್ಲವೂ ಹೋಗಿ ಪ್ರಭಾತವಾದಂತಾಯಿತು. ಮೋಹಾಂಧಕಾರವು
ತೊಲಗಿ ಜಗದ್ಭ್ರಮವೆಂಬ ನಿದ್ರೆಯು ಕಳೆದು, ಜ್ಞಾನವೆಂಬ ಚಂದ್ರನು
ಉಂಟಾದನು. ಶ್ರದ್ಧೆ, ವಿವೇಕ, ಮತಿ, ಶಾಂತಿ, ಯಮ, ಇವೇ ಮೊದ
ಲಾದ ಜ್ಞಾನಸಾಧನಗಳಿಂದ ವಿಶ್ವಾತ್ಮಕನಾದ ವಿಷ್ಣುವೇ ನಾನಾಗಿರುವೆನು.
ಸರ್ವಪ್ರಕಾರದಿಂದಲೂ ಭಗವತಿಯಾದ ವಿಷ್ಣುಭಕ್ತಿಯ ಅನುಗ್ರಹದಿಂದ
ಕೃತಕೃತ್ಯನಾದೆನು. ಈಗ ನಾನು ಸಂಗರಹಿತನಾಗಿ ಯಾವ ಪ್ರಶ್ನೆಯನ್ನೂ
ಮಾಡದೆ, ಯಾವ ಫಲಗಳನ್ನೂ ಅಪೇಕ್ಷಿಸದೆ, ದಿಕ್ಕುವಿದಿಕ್ಕುಗಳಲ್ಲಿ ಸಂಚ
ರಿಸುತ್ತಾ ಶಾಂತನಾಗಿಯೂ, ಭೀತಿ, ದುಃಖ, ರಾಗ, ದ್ವೇಷಾದಿ ಕಲ್ಮಷ
ಗಳು, ಮೋಹ, ಇವುಗಳನ್ನು ತೊರೆದವನಾಗಿ ನಿತ್ಯಮುಕ್ತನಾಗಿ ಮುನಿ
ಯಾಗಿರುವೆನು.

(ವಿಷ್ಣುಭಕ್ತಿಯು ಪ್ರವೇಶಿಸುವಳು.)

ವಿಷ್ಣುಭಕ್ತಿ—(ಹರ್ಷದಿಂದ) ಬಹುಕಾಲದ ಮೇಲೆ ನಮ್ಮ ಮನೋರಥಗಳೆಲ್ಲ ಪ್ರ

ಸಂಪೂರ್ಣವಾದವು. ಪುರುಷನೇ! ಶತ್ರುಗಳೆಲ್ಲರೂ ಅಡಗಿ ಹೋಗಿ ಸುಖವಾಗಿರುವ ನಿನ್ನನ್ನು ನೋಡಿದೆನಲ್ಲಾ!

ಪುರುಷ—ವಿಷ್ಣುಭಕ್ತಿದೇವಿಯ ಅನುಗ್ರಹವಿರುವಲ್ಲಿ ಯಾವುದುತಾನೆ ದುಷ್ಕರವು (ಎಂದು ನಮಸ್ಕರಿಸುವನು.)

ವಿಷ್ಣುಭಕ್ತಿ—ವತ್ಸನೇ, ಏಳು. ನಿನಗೆ ಇನ್ಯಾವ ಇಷ್ಟವನ್ನುಂಟುಮಾಡಲಿ?

ಪುರುಷ—ದೇವಿಯೇ, ವಿವೇಕನು ಶತ್ರುಗಳನ್ನು ಸಂಹರಿಸಿ ಕೃತಕೃತ್ಯನಾದನು. ನಿಷ್ಕಳಂಕವಾದ, ಸದಾನಂದವಾದ ವಸ್ತುವಿನಲ್ಲಿ ನಾನು ಇರಿಸಲ್ಪಟ್ಟೆನು. ಇದಕ್ಕಿಂತಲೂ ಹೆಚ್ಚಾದ ನನ್ನ ಇಷ್ಟವು ಇನ್ನೇನಿರುವುದು? ಆದರೆ, ಇಷ್ಟು ಕೇಳಿಕೊಳ್ಳುವೆನು. ಲೋಕದಲ್ಲಿ ಮೇಘವು ಬೇಕಾದ ಹಾಗೆ ಮಳೆಯನ್ನು ಹೆಚ್ಚಾಗಿ ಸುರಿಯಲಿ. ರಾಜರುಗಳು ಯಾವವಿಧವಾದ ತೊಂದರೆಯೂ ಇಲ್ಲದೆ ಭೂಮಿಯನ್ನು ಸುಖವಾಗಿ ಪರಿಪಾಲಿಸಲಿ. ಸ್ವರೂಪ ಜ್ಞಾನವು ಜನಗಳಿಗೆ ಉಂಟಾಗಿ, ಅಜ್ಞಾನವು ಹೋಗಿ, ನಿನ್ನ ಅನುಗ್ರಹದಿಂದ ವಿಷಯಗಳೂ, ಮಮತೆಗಳೂ, ಆತಂಕಗಳೂ, ಇವುಗಳೆಂಬ ಕೆಸರುಳ್ಳ ಸಂಸಾರ ಸಮುದ್ರವನ್ನು ದಾಟಲಿ. (ಎಂದು ಹೊರಟುಹೋಗುವರು.)

ಸಂಪೂರ್ಣ.

## ಪೌರಸಾಮಾಜಿಕ ಪತ್ರಿಕೆ.

ಚಂದಾ ವಿವರ:—

ವಾರ್ಷಿಕ ಚಂದಾ 2-0-0 ರೂ. ಟಪಾಲು ಹಾಸಲು 0-4-0

ಬಿಡಿ ಪತ್ರಿಕೆ ಒಂದಕ್ಕೆ 0-4-0

---

## ಸಂಪದಭ್ಯುದಯ.

ದಿನಚರಿಪತ್ರಿಕೆ ! ದಿನಚರಿಪತ್ರಿಕೆ

ಚಂದಾ ವಿವರ :—

| | ಸ್ಥಳದವರಿಗೆ. | ಪರಸ್ಥಳದವರಿಗೆ. (ಟಪ್ಪಾಲ್ ಹಾಸಲು ಸೇರಿ |
|---|---|---|
| ವರ್ಷಕ್ಕೆ | 7—8—0 | 12—8—0 |
| 6 ತಿಂಗಳಿಗೆ | 4—2—0 | 6—12—0 |
| 3 ತಿಂಗಳಿಗೆ | 2—2—0 | 3—6—0 |
| 1 ತಿಂಗಳಿಗೆ | 0—12—0 | 1—2—0 |
| ಬಿಡಿಪತ್ರಿಕೆ 1 ಕ್ಕೆ | 0—0—6 | 0—0—9 |

ಮ್ಯಾನೇಜರ್, ಸಂಪದಭ್ಯುದಯ, ಮೈಸೂರು

---

## ಮ॥ ಎಂ ವೆಂಕಟಕೃಷ್ಣಯ್ಯನವರಿಂದ ವಿರಚಿತವಾದ ಕನ್ನಡ ಪುಸ್ತಕಗಳು

| | |
|---|---|
| ಬೂಕರ್ ಟಿ. ವಾಷಿಂಗ್‌ಟನ್‌ರವರ ಚರಿತ್ರೆ. | 1—0—0 |
| ಅರ್ಥಸಾಧನ | 0—8—0 |
| ಪರಂತಪವಿಜಯ | 0—8—0 |
| ಚೋರಗ್ರಹಣತಂತ್ರ | 0—4— |
| ಜಲಿಮಾಕಸ್ಸನ ಚರಿತ್ರೆ 1ನೇ ಭಾಗ | |
| ಆರೋಗ್ಯನಿದಾನಪ್ರಕಾಶಿಕೆ | |
| ದೇಶಾಭಿಮಾನ | |
| ವಿದ್ಯಾರ್ಥಿ ಕರಭೂಷಣ.... | |

ಟಪ್ಪಾಲು ಖರ್ಚು ಬೇರೆ. ಬೇಕಾದವರು ಬರೆದು ತರಿಸಿಕೊಳ್ಳಬಹುದು.